RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಡಿಸೆಂಬರ್ ೫, ೨೦೧೩ (ಮಾರ್ಗಶಿರ ೧೪, ಶಕ ವರ್ಷ ೧೯೩೫)<br>Bangalore, Thursday, December 5, 2013 (Margashira 14, Shaka Varsha 1935) | ಸಂಚಿಕೆ ೪೮<br>Issue 48 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ ರಿಜ್ವಾನ್, ಮಾಜಿ ಎಪಿಸಿ–131, ಡಿಎಆರ್, ಕೆಜಿಎಫ್ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಚಿನ್ನದ ಗಣಿ ಪ್ರದೇಶ, ಇವರ ಆದೇಶ ಸಂಖ್ಯೆ ಸಿಬ್ಬಂದಿ (2)/ಇವಿ/01/2009 (ಒ.ಬಿ. ಸಂಖ್ಯೆ: 288/2010) ದಿನಾಂಕ 21/22.12.2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/79/ಪನ್ನಿ/2010–11 (ಓ.ಬಿ. ಸಂಖ್ಯೆ: 46/2011–12) ದಿನಾಂಕ 03.10.2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 31.12.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)71/2012–13 ದಿನಾಂಕ: 30.05.2013

**ಪ್ರಸ್ತಾವನೆ:**

ಶ್ರೀ ಎಂ ರಿಜ್ವಾನ್, ಮಾಜಿ ಎಪಿಸಿ–131, ಡಿಎಆರ್, ಕೆಜಿಎಫ್ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಲೋಪವನ್ನು ಎಸಗಿದ ಕಾರಣದ ಮೇಲೆ ಇನ್ನೋರ್ವ ಸಿಬ್ಬಂದಿಯೊಂದಿಗೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಸೈಯದ್ ಕರೀಂವುಲ್ಲಾ ಸಿ.ಹೆಚ್.ಸಿ. 84 ಡಿ.ಸಿ.ಆರ್.ಬಿ. ಕೆ.ಜಿ.ಎಫ್. ಮತ್ತು ಶ್ರೀ ಎಂ ರಿಜ್ವಾನ್ ಎ.ಪಿ.ಸಿ 131, ಡಿ.ಎ.ಆರ್. ಕೆ.ಜಿ.ಎಫ್. ಆದ ನೀವುಗಳು ಬೆಂಗಳೂರು ನಗರದ ಹೆಬ್ಬಾಳ ಪೊಲೀಸ್ ಠಾಣೆಯ ಮೊ.ಸಂ. 241/2008 ಕಲಂ 399–402–ಐ.ಪಿ.ಸಿ. ಮತ್ತು ವಿದ್ಯಾರಣ್ಯಪುರಂ ಪೊಲೀಸ್ ಠಾಣೆ ಮೊ.ಸಂ. 232/2008 ಕಲಂ 323–364(ಎ)–342–395 ಐಪಿಸಿ ಪ್ರಕರಣಗಳಲ್ಲಿ ಪ್ರಮುಖ ಆರೋಪಿಗಳಾಗಿದ್ದು, ನಿಮ್ಮನ್ನು ಬೆಂಗಳೂರು ನಗರ ಸಿಸಿಬಿ ಪೊಲೀಸರು ದಿನಾಂಕ: 16.10.2008 ರಂದು ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿರುತ್ತಾರೆ. ನೀವುಗಳು ಶಿಸ್ತಿನ ಇಲಾಖೆಯಲ್ಲಿದ್ದುಕೊಂಡು ಕ್ರಿಮಿನಲ್ ಪ್ರಕರಣಗಳಲ್ಲಿ ಭಾಗಿಯಾಗಿರುತ್ತೀರೆಂದು ನಿಮ್ಮಗಳ ಮೇಲೆ ಆರೋಪವಿರುತ್ತದೆ.

ನೀವು ಪೊಲೀಸ್ ಸಿಬ್ಬಂದಿಯಾಗಿ ಶಿಸ್ತಿನ ಇಲಾಖೆಯಲ್ಲಿದ್ದು, ಕಾನೂನು ಕಾಪಾಡುವ ಜವಾಬ್ದಾರಿಯುತ ಹುದ್ದೆಯಲ್ಲಿ ಭರ್ತಿಯಾಗಿರುವುದಾಗಿ ತಿಳಿದಿದ್ದರೂ ಸಹ ನೀವು ಶಿಸ್ತನ್ನು ಕಾಪಾಡುವ ಬದಲು ನೀವುಗಳೇ ಇತರೆ ಆರೋಪಿಗಳೊಂದಿಗೆ ಶಾಮೀಲಾಗಿ ಘೋರ ಅಪರಾಧ ಪ್ರಕರಣಗಳಲ್ಲಿ ಭಾಗಿಯಾಗಿ ಇಡೀ ಸಮಾಜ ಪೊಲೀಸ್ ಇಲಾಖೆಗೆ ದೂಷಿಸುವಂತೆ ಮಾಡಿ ಇಲಾಖೆಯ ಘನತೆಗೆ ಕುಂದುಂಟು ಮಾಡಿ ನಿಮ್ಮ ಕರ್ತವ್ಯದಲ್ಲಿ ಅತೀವ ಘೋರ ದುರ್ನಡತೆ ಮತ್ತು ಬೇಜವಾಬ್ದಾರಿತನವನ್ನು ತೋರ್ಪಡಿಸಿರುತ್ತೀರೆಂದು ದೋಷಾರೋಪಣೆ ಮಾಡಲಾಗಿದೆ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಚಿನ್ನದ ಗಣಿ ಪ್ರದೇಶ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 21/22.12.2010ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ **"ವಜಾ" ಮಾಡಿ** ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 11.10.2008 ರಿಂದ 06.04.2009ರ ವರೆಗೆ ಅಮಾನತ್ತೆಂದೇ ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03.10.2011ರ ಆದೇಶದಲ್ಲಿ ತಿರಸ್ಕರಿಸಿ, ಶಿಸ್ತು ಪ್ರಾಧಿಕಾರಿಗಳು ವಿಧಿಸಿರುವ ದಂಡನಾದೇಶವನ್ನು ಎತ್ತಿ ಹಿಡಿದಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕ್ರಿಮಿನಲ್ ಪ್ರಕರಣದಲ್ಲಿ ಭಾಗಿಯಾಗಿರುವುದು ಸಾಬೀತಾದ ಕಾರಣ ಶಿಸ್ತು ಪ್ರಾಧಿಕಾರ ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 05 ಪೊಸಿಅ 2013 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ ರಿಜ್ವಾನ್, ಮಾಜಿ ಎಪಿಸಿ–131, ಡಿಎಆರ್, ಕೆಜಿಎಫ್ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1050**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪ್ರಕಾಶ ರೆಡ್ಡಿ, ಸಿಎಚ್‌ಸಿ–105, ಬಂಗಾರಪೇಟೆ ಪೊಲೀಸ್ ಠಾಣೆ ಕೆ.ಜಿ.ಎಫ್. ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಚಿನ್ನದ ಗಣಿ ಪ್ರದೇಶ, ಕೋಲಾರ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–1/ಡಿಇ/02/2010 ದಿನಾಂಕ: 05.09.2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/49/ಪನ್ನಿ/2011–12 (ಒ.ಬಿ.ಸಂಖ್ಯೆ:65/2012–13) ದಿನಾಂಕ: 11.09.2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 08.01.2013
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)73/2012–13 ದಿನಾಂಕ: 16.04.2013

**ಪ್ರಸ್ತಾವನೆ:**

ಶ್ರೀ ಪ್ರಕಾಶ ರೆಡ್ಡಿ, ಸಿಎಚ್‌ಸಿ–105, ಬಂಗಾರಪೇಟೆ ಪೊಲೀಸ್ ಠಾಣೆ ಕೆ.ಜಿ.ಎಫ್. ಇವರು ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಠಾಣೆಯ ಸಿಬ್ಬಂದಿಯ ಸಮಕ್ಷಮವೇ ಪಿ.ಎಸ್.ಐ. ರವರೊಂದಿಗೆ ಏರು ಧ್ವನಿಯಲ್ಲಿ ಗುಪ್ತ ಮಾಹಿತಿ ಕರ್ತವ್ಯಕ್ಕೆ ನೇಮಿಸಿಲ್ಲವೆಂದು ಗರ್ವದಿಂದ ಮಾತನಾಡಿ ಅಶಿಸ್ತು ಮತ್ತು ದುರ್ನಡತೆ ತೋರಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಆ.ಪೋ.ಅ ಶ್ರೀ ಪ್ರಕಾಶ ರೆಡ್ಡಿ, ಸಿಎಚ್‌ಸಿ–105, ಬಂಗಾರಪೇಟೆ ಪೊಲೀಸ್ ಠಾಣೆ ಕೆ.ಜಿ.ಎಫ್. ರವರು ಶಿಸ್ತಿನ ಇಲಾಖೆ (ಪೊಲೀಸ್ ಇಲಾಖೆ) ಯಲ್ಲಿ ಕೆಲಸ ಮಾಡುತ್ತಿದ್ದು, ದಿನಾಂಕ: 02.01.2010 ರಂದು ಪಿ.ಎಸ್.ಐ.(ಕಾ&ಸು) ಬಂಗಾರ ಪೇಟೆ ಪೊಲೀಸ್ ಠಾಣೆ ರವರು ಠಾಣೆಯಲ್ಲಿ ಸಿಬ್ಬಂದಿಯ ಹಾಜರಾತಿ ಪಡೆದು ಕೋಲಾರದಲ್ಲಿ ಬ/ಬ. ಕರ್ತವ್ಯಕ್ಕೆ ಎಂದು ನಿಮಗೆ ಮತ್ತು ಇತರೆ ಸಿಬ್ಬಂದಿಯವರಿಗೆ ನೇಮಿಸಿದಾಗ ಶ್ರೀ ಪ್ರಕಾಶರೆಡ್ಡಿ, ಸಿ.ಎಚ್.ಸಿ 105, ಆದ ನೀವು ಠಾಣೆಯ ಸಿಬ್ಬಂದಿಯ ಸಮಕ್ಷಮವೇ ಪಿ.ಎಸ್.ಐ. ರವರೊಂದಿಗೆ ಅನುಚಿತವಾಗಿ ಏರು ಧ್ವನಿಯಲ್ಲಿ "ನಾನು ಬಂಗಾರಪೇಟೆ ಪೊಲೀಸ್ ಠಾಣೆಗೆ ಬಂದ ದಿನದಿಂದಲೂ ನನಗೆ ಗುಪ್ತಮಾಹಿತಿ ಕರ್ತವ್ಯ ಕೊಡಿ ಎಂದು ಕೇಳುತ್ತಿದ್ದರೂ ಸಹ ನನಗೆ ಕೊಡುತ್ತಿಲ್ಲ. ನಾನು ಎಷ್ಟೋ ಜನ ಸಬ್ ಇನ್ಸ್‌ಪೆಕ್ಟರ್ ಗಳನ್ನು ನೋಡಿಕೊಂಡು ಇಲ್ಲಿಗೆ ಬಂದಿರುವುದು. ನನಗೆ ಯಾರೂ ಅಡ್ಡಿ ಹೇಳಿಲ್ಲ. ನಾನು ಪಿಟಿಷನ್ ಕೊಟ್ಟರೆ ಅಷ್ಟೆ" ಎಂದು ಪಿ.ಎಸ್.ಐ. ರವರಿಗೆ ಕೈ ತೋರಿಸಿ ಗರ್ವದಿಂದ ಮಾತನಾಡಿ ಅಶಿಸ್ತು ಮತ್ತು ದುರ್ನಡತೆ ತೋರ್ಪಡಿಸಿರುತ್ತೀರಿ ಎಂದು ದೋಷರೋಪಣೆ ಮಾಡಲಾಗಿದೆ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಚಿನ್ನದ ಗಣಿ ಪ್ರದೇಶ, ಕೋಲಾರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 05.09.2011ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷದ ಕಾಲ ಮುಂದೂಡಿದೆ ಹಾಗೂ ಇವರ ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 24.01.2010 ರಿಂದಿ 25.08.2010ರ ವರೆಗೆ ಅಮಾನತ್ತೆಂದೇ ಪರಿಗಣಿಸಿ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11.09.2011ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷತನ, ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 9 ಪೊಸಿಅ 2013 ಬೆಂಗಳೂರು, ದಿನಾಂಕ: 13.08.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪ್ರಕಾಶ ರೆಡ್ಡಿ, ಸಿಎಚ್‌ಸಿ–105, ಬಂಗಾರಪೇಟೆ ಪೊಲೀಸ್ ಠಾಣೆ ಕೆ.ಜಿ.ಎಫ್. ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1062**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್ ಸಕ್ರೇಯ್ಯನಾಯ್ಕ್, ನಿವೃತ್ತ ಹೆಚ್‌ಸಿ–171, ಚಿಕ್ಕಮಗಳೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ ಇವರ ಆದೇಶ ಸಂಖ್ಯೆ ಪನ್‌ಸಿ:ಸಿಆರ್:3:94–95 (ಒ.ಬಿ. ಸಂಖ್ಯೆ: 314/96) ದಿನಾಂಕ 13.11.1996
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು ಇವರ ಆದೇಶ ಸಂಖ್ಯೆ 55/96–97 ದಿನಾಂಕ 30.06.1998.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19.03.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)1/2013–14 ದಿನಾಂಕ: 10.07.2013

**ಪ್ರಸ್ತಾವನೆ:**

ಶ್ರೀ ಆರ್ ಸಕ್ರೇಯ್ಯನಾಯ್ಕ್, ನಿವೃತ್ತ ಹೆಚ್‌ಸಿ 171, ಚಿಕ್ಕಮಗಳೂರು ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1. ದಿನಾಂಕ: 23.03.1994ರಂದು ಬೆಳಿಗ್ಗೆ 8 ಗಂಟೆಯ ವೇಳೆಯಲ್ಲಿ ಲಕ್ಕವಳ್ಳಿ ಠಾಣೆಯ ಪಿ.ಎಸ್.ಐ.ರವರು ಸಿಬ್ಬಂದಿಗಳಿಗೆ ರೋಲ್ ಕಾಲ್ ಮಾಡುವಾಗ ಸಿಬ್ಬಂದಿಯ ಎದುರಿನಲ್ಲಿಯೇ ಪಿ.ಎಸ್.ಐ.ರವರಿಗೆ ಅವಾಚ್ಯ ಶಬ್ದಗಳಿಂದ ಬೈಯ್ದು, ಅವರೊಂದಿಗೆ ಉದ್ಧಟತನ ವರ್ತಿಸಿ ಘೋರ ದುರ್ನಡತೆಯಿಂದ ವರ್ತಿಸಿರುವುದು
2. ನಿಮ್ಮ ದುರ್ನಡತೆಯ ವಿರುದ್ಧ ಜಿಲ್ಲಾ ಅಧೀಕ್ಷಕರು ನಿಮ್ಮನ್ನು ಅಮಾನತ್ತನಲ್ಲಿರಿಸಿ, ಹೊರಡಿಸಿದ್ದ ಆದೇಶ ಪತ್ರವನ್ನು ಜಾರಿಗೊಳಿಸಲು ಹೋದಾಗ ನೀವು ಅಮಾನತ್ತಿನ ಅದೇಶ ಪತ್ರವನ್ನು ತೆಗೆದುಕೊಳ್ಳದೇ ಉಲ್ಲಂಘನೆ ಮಾಡಿರುತ್ತೀರಿ.

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 13.11.1996ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು 5 ವರ್ಷಗಳ ಕಾಲ ಕನಿಷ್ಠ ವೇತನಕ್ಕೆ ಇಳಿಸುವ ದಂಡನೆಯನ್ನು ವಿಧಿಸಿ, ದಿನಾಂಕ: 31.03.1994 ರಿಂದ 19.04.1994 ರವರೆಗೆ ಅಮಾನತ್ತಿನಲ್ಲಿ ಕಳೆದ ಕಾಲವನ್ನು ಅಮಾನತ್ತಿನಲ್ಲಿಯೇ ಕಳೆದ ಕಾಲವೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ಮಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 30.06.1998ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 1 ವರ್ಷಕಾಲ ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳಿಗೆ

ಪರಿಣಾಮ ಬೀರುವಂತೆ ತಡೆಹಿಡಿದು, ಅಮಾನತ್ತಿನ ಅವಧಿ ದಿನಾಂಕ: 31.03.1994 ರಿಂದ 19.04.1994ರ ಅವಧಿಯನ್ನು ಹಾಗೆಂದೇ ಪರಿಗಣಿಸಿ, ಈ ಅವಧಿಯು ವೇತನ ಭತ್ಯೆಗಳನ್ನು ಅವರು ಈಗಾಗಲೇ ಪಡೆದ ಜೀವನಾಧಾರ ಭತ್ಯೆಕ್ಕೆ ಸೀಮಿತಗೊಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಹಾಗೂ ಶಿಸ್ತುಪ್ರಾಧಿಕಾರದ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿರುವುದರಿಂದ ಮೇಲ್ಮನವಿ ಪ್ರಾಧಿಕಾರದ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 43 ಪೊಸಿಅ 2013 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್ ಸಕ್ರೀಯ್ಯ ನಾಯ್ಕ್, ನಿವೃತ್ತ ಹೆಚ್‌ಸಿ–171, ಚಿಕ್ಕಮಗಳೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1053**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ.ಕಾಶಿನಾಥ್, ಪಿ.ಎಸ್.ಐ., ಹೆಚ್.ಬಿ. ಹಳ್ಳಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ ಇವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಕುರಿತು

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರ ಆದೇಶ ಸಂಖ್ಯೆ: 17/ಪಿಆರ್ /ಸಿಬ್ಬಂದಿ–4/2012, (ಓ.ಬಿ. ಸಂಖ್ಯೆ: 149/12 ದಿನಾಂಕ: 21.03.2012\
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಹಿಂಬರಹ ಸಂಖ್ಯೆ: 45/ಸಿಬ್ಬಂದಿ–2/2012–13, ದಿನಾಂಕ: 29.09.2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04.04.2013
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)7/2013–14 ದಿನಾಂಕ: 20.06.2013
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 110 ಸಿಎನ್‌ಎಸ್ 2013 ದಿನಾಂಕ: 21.09.2013

**ಪ್ರಸ್ತಾವನೆ:**

ಶ್ರೀ ಜಿ.ಕಾಶಿನಾಥ್, ಪಿ.ಎಸ್.ಐ., ಹೆಚ್.ಬಿ. ಹಳ್ಳಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಬಳ್ಳಾರಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿಯಲ್ಲಿ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಹಿಂದು ಮುಸ್ಲಿಂ ಗಲಭೆಯಾಗಿದ್ದು ಸದರಿ ಘಟನೆಯ ಬಗ್ಗೆ ಮುಂಜಾಗ್ರತ ಕ್ರಮ ಕೈಗೊಳ್ಳದೇ ಕರ್ತವ್ಯದಲ್ಲಿ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ತೋರಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 21.03.2012ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 06 ತಿಂಗಳ ಕಾಲ ತಡೆಹಿಡಿಯಲಾಗಿದೆ. ಎಂದು ಆದೇಶಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29.09.2012ರ ಆದೇಶದಲ್ಲಿ ನಿಗದಿತ ಅವಧಿಯೊಳಗೆ ಮೇಲ್ಮನವಿ ಸಲ್ಲಿಸದ ಕಾರಣ, ಕಾಲ ವಿಳಂಬಿತ ಮೇಲ್ಮನವಿಯೆಂದು ಪರಿಗಣಿಸಿ, ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ಅಹಿತಕರ ಘಟನೆ ನಡೆಯುವ ಮುನ್ನ ಎರಡೂ ಪಾರ್ಟಿಯವರನ್ನು ಕರೆಯಿಸಿ ಸಂಧಾನ ನಡೆಸಿ, ಯಾವುದೇ ಅಹಿತಕರ ಘಟನೆ ನಡೆಯುವುದನ್ನು ತಡೆಗಟ್ಟಿರುತ್ತಾರೆ ಮತ್ತು ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಅಥವಾ ಇನ್ನಾವುದೇ ನಷ್ಟ ಉಂಟಾಗಿಲ್ಲದ ಹಿನ್ನಲೆಯಲ್ಲಿ ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಹೆಚ್ಚಿನದಾಗಿರುವುದೆಂದು ಪರಿಗಣಿಸಿ, ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ, ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 49 ಪೊಸಿಅ 2013 ಬೆಂಗಳೂರು, ದಿನಾಂಕ: 27.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಕಾಶಿನಾಥ್, ಪಿ.ಎಸ್.ಐ., ಹೆಚ್.ಬಿ. ಹಳ್ಳಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 21.03.2012ರ ಆದೇಶದಲ್ಲಿ ವಿಧಿಸಿರುವ ದಂಡನೆಯ ಬದಲಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳ ನಿಯಮ 23(1)(a)(i)ರನ್ವಯ **"ವಾಗ್ದಂಡನೆ"** (censure) ವಿಧಿಸಲು ಸರ್ಕಾರವು ತೀರ್ಮಾನಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1061**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಜಿ. ರಾಜು, ಎಪಿಸಿ–114, ಡಿಎಆರ್, ಬೀದರ್ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಇವರ ಆದೇಶ ಸಂಖ್ಯೆ 12/ಇವಿ/ಬೀ/2008 (ಆದೇಶ ಪುಸ್ತಕ ಸಂಖ್ಯೆ: 1078/2009) ದಿನಾಂಕ 14.12.2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರ ಆದೇಶ ಸಂಖ್ಯೆ ಅಪೀಲು/64/ಈವ/2012–13/557 (ಆ.ಪು.ಸಂ.68/ಈವ/2013) ದಿನಾಂಕ 05.02.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10.05.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)11/2013–14 ದಿನಾಂಕ: 16.07.2013

**ಪ್ರಸ್ತಾವನೆ:**

ಶ್ರೀ ಎಂ.ಜಿ. ರಾಜು, ಎಪಿಸಿ–114, ಡಿಎಆರ್, ಬೀದರ್ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ಎಂ.ಜಿ. ರಾಜು ಎ.ಪಿ.ಸಿ. 301 ಡಿ.ಎ.ಆರ್. ಬೀದರ ಇದ್ದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಜವಾಬ್ದಾರಿತ ಸಿಬ್ಬಂದಿಯಾಗಿದ್ದು ಕರ್ನಾಟಕ ಪೊಲೀಸ್ ಕೈಪಿಡಿ ಆದೇಶಗಳ ಪ್ರಕಾರ ಮತ್ತು ಮೇಲಾಧಿಕಾರಿಯವರ ಕಾಲ ಕಾಲಕ್ಕೆ ನೀಡುವ ಆದೇಶಗಳ ಪಾಲನೆ ಮಾಡುವುದು ನಿಮ್ಮ ಆದ್ಯ ಕರ್ತವ್ಯವಾಗಿದೆ. ಆದರೆ ನೀವು ಮೇಲಾಧಿಕಾರಿಯವರಿಗೆ ಯಾವುದೇ ರೀತಿಯ ಮಾಹಿತಿಯನ್ನು ಸಲ್ಲಿಸದೆ, ರಜೆ ಅರ್ಜಿಯನ್ನು ಸಲ್ಲಿಸದೆ ಅಥವಾ ಅನುಮತಿ ಪಡೆಯದೆ ಕರ್ತವ್ಯದಿಂದ ದಿನಾಂಕ: 16.02.2006 ರಿಂದ ಇಲ್ಲಿಯವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ. ನೀವು ಗೈರು ಹಾಜರಾದ ಅವಧಿ 20 ದಿವಸಗಳಿಗು ಮೀರಿದ ಪ್ರಯುಕ್ತ ಕೆ.ಪಿ.ಎಮ್. ಆದೇಶ ಸಂಖ್ಯೆ 525 ಮತ್ತು ಕರ್ನಾಟಕ ಪೊಲೀಸ್ ಅಧಿನಿಯಮ 1963 ನಿಯಮ 27 ಜೊತೆ 118 ಅನ್ವಯ ಮಾನ್ಯ ಪೊಲೀಸ್ ಅಧೀಕ್ಷಕರು ಬೀದರ ರವರ ಕಛೇರಿಯಿಂದ ಡಿಜರ್ಟರ್ ನೋಟೀಸ್ ಹೊರಡಿಸಿ ಜಾರಿ ಕುರಿತು ಆರ್.ಪಿ.ಐ. ಡಿ.ಎ.ಆರ್. ಬೀದರ ರವರ ಮೂಲಕ ಕಳಿಹಿಸಲಾಗಿತ್ತು ಅದನ್ನು ನೀವು ದಿನಾಂಕ: 15.01.2007 ರಂದು ಸ್ವೀಕರಿಸಿರುತ್ತೀರಿ ಸದರಿ ಸೂಚನಾ ಪತ್ರದಲ್ಲಿ ತಿಳಿಸಿರುವಂತೆ ನೀವು ಕರ್ತವ್ಯಕ್ಕೆ ಹಾಜರಾಗುವ ಇಚ್ಛೆ ಹೊಂದಿದ್ದರೆ ಸದರಿ ಸೂಚನಾ ಪತ್ರ ಸ್ವೀಕರಿಸಿದ ಕೂಡಲೆ ಮಾನ್ಯ ಪೊಲೀಸ್ ಅಧೀಕ್ಷಕರು ಬೀದರ ರವರ ಕಛೇರಿಯಲ್ಲಿ ಬಂದು ಹಾಜರಾಗಬೇಕಾಗಿತ್ತು ಆದರೆ ದೀರ್ಘಾವಧಿಯ ವರೆಗೆ ನೀವು ಬಾರದೆ ಇಲಾಖೆ ನೀತಿ ನಿಯಮಗಳನ್ನು ಉಲ್ಲಂಘಿಸಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ವಹಿಸಿ ಗಂಭೀರ ಲೋಪ ಎಸಗಿರುತ್ತಿರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 14.12.2009ರ ಆದೇಶದಲ್ಲಿ ಅರ್ಜಿದಾರರಿಗೆ ಆದೇಶ ಜಾರಿಯಾದ ದಿನಾಂಕದಿಂದ ಸೇವೆಯಿಂದ ವಜಾಗೊಳಿಸಿ, ಅವರು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದ ಅವಧಿ (ದಿನಾಂಕ 16.12.2006 ರಿಂದ 05.12.2008ರವರೆಗೆ ಒಟ್ಟು 720 ದಿವಸಗಳು)ಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿ ದಂಡನೆ ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 05.02.2013ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸಿ ಅರ್ಜಿದಾರರನ್ನು ಪುನಃ ಸೇವೆಗೆ ತೆಗೆದುಕೊಳ್ಳಲು ಆದೇಶಿಸಿ, ಇವರ ವೇತನವನ್ನು ಪೇದೆಯ ಹುದ್ದೆಯ ಕನಿಷ್ಟ ಹಂತಕ್ಕೆ ಒಂದು ವರ್ಷ ಕಾಲ ಇಳಿಸಿ, ಇವರ ಮುಂದಿನ ವೇತನ ಮುಂಬಡ್ತಿ ಪ್ರತಿ ವರ್ಷ ಹೊಸದಾಗಿ (afresh) ಪಡೆಯುವುದು ಹಾಗೂ ಅವರು ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು **"Dies Non"** ಕರ್ತವ್ಯವಿಲ್ಲ, ಸಂಬಳವಿಲ್ಲ ಎಂದು ಪರಿಗಣಿಸಿ, ಅರ್ಜಿದಾರರು ಕರ್ತವ್ಯಕ್ಕೆ ವರದಿ ಮಾಡಿದ ದಿನಾಂಕದಿಂದ ಇವರ ಸಂಬಳ ಪ್ರಾರಂಭವಾಗುವುದು ಎಂದು ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ

ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷ್ಯತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿದ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 56 ಪೊಸಿಅ 2013 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಜಿ. ರಾಜು, ಎಪಿಸಿ–114, ಡಿಎಆರ್, ಬೀದರ್ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1051**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಸಿ. ದಶರಥಮೂರ್ತಿ, ಸಿ.ಪಿ.ಐ., ಕೇಂದ್ರ ವೃತ್ತ, ದಾವಣಗೆರೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರ ಆದೇಶ ಸಂಖ್ಯೆ ಸಿಬ್ಬಂದಿ(5)/ಪಿಆರ್/255/2011 (ಒ.ಬಿ. ಸಂಖ್ಯೆ 68/2012) ದಿನಾಂಕ 17.01.2012

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ 54/ಅಪೀಲು/ಸಿಬ್ಬಂದಿ–2/2011–12 (ಒ.ಬಿ. ಸಂಖ್ಯೆ 37/2012–13) ದಿನಾಂಕ 21.05.2012

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04.10.2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)79/2012–13 ದಿನಾಂಕ 01.08.2013

**ಪ್ರಸ್ತಾವನೆ:**

ಶ್ರೀ ಎಂ.ಸಿ. ದಶರಥಮೂರ್ತಿ, ಸಿ.ಪಿ.ಐ., ಕೇಂದ್ರ ವೃತ್ತ, ದಾವಣಗೆರೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಎಂ.ಸಿ.ದಶರಥಮೂರ್ತಿ ಆದ ನೀವು ಕೇಂದ್ರ ವೃತ್ತದ ಸಿ.ಪಿ.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಘನ ನ್ಯಾಯಾಲಯದಿಂದ ಸ್ವೀಕೃತವಾಗುವ ಎಲ್ಲಾ ವಿಧದ ಆದೇಶಗಳನ್ನು ಚಾಚೂ ತಪ್ಪದೆ ಪಾಲಿಸುವಂತೆ ಹಾಗೂ ನ್ಯಾಯಾಲಯಗಳಿಂದ ಕೋರಲಾಗುವ ಮಾಹಿತಿಯನ್ನಾಗಲೀ ಅಥವಾ ಪ್ರಕರಣಗಳಲ್ಲಿನ ಮುದ್ದೆ ಮಾಲುಗಳನ್ನು ನ್ಯಾಯಾಲಯದ ಕಲಾಪಗಳಿಗೆ ಅಡ್ಡಿಯಾಗದಂತೆ ನಿಗದಿತ ಅವಧಿಯೊಳಗಾಗಿ ನ್ಯಾಯಾಲಯದ ನಿರ್ದೇಶಾನುಸಾರ ಹಾಜರುಪಡಿಸುವಂತೆ ವಲಯ ಕಛೇರಿಯಿಂದ ಹಾಗೂ ಈ ಕಛೇರಿಯಿಂದ ಹಲವಾರು ಬಾರಿ ಜ್ಞಾಪನ/ಸುತ್ತೋಲೆಗಳನ್ನು ನೀಡಿ ನಿರ್ದೇಶನಗಳನ್ನು ನೀಡಿದ್ದಾಗ್ಯೂ, ನಿಮ್ಮ ವೃತ್ತ ವ್ಯಾಪ್ತಿಯಲ್ಲಿ ಬರುವ ಬಡಾವಣೆ ಪೊಲೀಸ್ ಠಾಣೆ ಗುನ್ನೆ ನಂ. 196/2001ರ ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಿ.ಸಿ.ನಂ.69/2003 ಪ್ರಕರಣದಲ್ಲಿ ವಶಪಡಿಸಿಕೊಂಡ ಮುದ್ದೆ ಮಾಲನ್ನು ನ್ಯಾಯಾಲಯದ ಮುಂದೆ ಹಾಜರ್‌ಪಡಿಸಲು ದಿನಾಂಕ 11.02.2010ರಿಂದಲೂ ನಿರ್ದೇಶನ ನೀಡುತ್ತಿದ್ದು, ಪ್ರಕರಣದ ಎಲ್ಲಾ ಮುದ್ದೇ ಮಾಲುಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಲು ದಿನಾಂಕ 04.03.2011ರಂದು ನೋಟಿಸ್ ನೀಡಿರುತ್ತಾರೆ. ಆದರೆ ಬಡಾವಣೆ ಪೊಲೀಸ್ ಠಾಣೆಯ ಪಿ.ಎಸ್.ಐ, ಅಪರಾಧರವರು ಈ ಬಗ್ಗೆ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ನಿಮ್ಮ ಅಧೀನ ಅಧಿಕಾರಿಗಳ ಕಾರ್ಯವೈಖರಿ ಬಗ್ಗೆ ನೀವು ನಿಗಾವಣೆ ಇಡದೆ, ಘನ ನ್ಯಾಯಾಲಯದ ಆದೇಶಗಳನ್ನು ಪಾಲನೆ ಮಾಡದೇ ಉಲ್ಲಂಘಿಸಿ ನ್ಯಾಯಾಲಯದ ಕಲಾಪಗಳಿಗೆ ಅಡ್ಡಿಪಡಿಸಿದ್ದಲ್ಲದೇ, ಈ ಕುರಿತು ನ್ಯಾಯಾಲಯದಿಂದ ಆಕ್ಷೇಪಣೆಗಳು ಬರಲು ಕಾರಣೀಭೂತರಾಗಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17.01.2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು (06) ತಿಂಗಳ ಕಾಲ ಮುಂದೂಡಿರುತ್ತಾರೆ ಹಾಗೂ ಸದರಿ ಶಿಕ್ಷಾದೇಶವು ಅರ್ಜಿದಾರರು ಹಾಲಿ ಯಾವುದಾದರೂ ಚಾಲ್ತಿ ಶಿಕ್ಷೆಗಳನ್ನು ಅನುಭವಿಸುತ್ತಿದ್ದಲ್ಲಿ ಸದರಿ ಶಿಕ್ಷಾ ಅವಧಿಯ ಮುಗಿದ ದಿನಾಂಕದಿಂದ ಜಾರಿಗೆ ಬರುವಂತೆ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 21.05.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 107 ಪೊಸಿಅ 2012 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಎಂ.ಸಿ. ದಶರಥಮೂರ್ತಿ, ಸಿ.ಪಿ.ಐ., ಕೇಂದ್ರ ವೃತ್ತ, ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1054
SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಚಂದ್ರಯ್ಯ, ಎ.ಎಸ್.ಐ., ಮಹದೇವಪುರ ಪೊಲೀಸ್ ಠಾಣೆ, ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ 02/ಡಿಇ/ಆರ್–7/12–13 ದಿನಾಂಕ 20.01.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ಇವರ ಆದೇಶ ಸಂಖ್ಯೆ 28/ಅಪೀಲು–1/2012 ದಿನಾಂಕ 21.06.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30.08.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)40/2012–13 ದಿನಾಂಕ 24.06.2013

**ಪ್ರಸ್ತಾವನೆ:**

ಶ್ರೀ ಚಂದ್ರಯ್ಯ, ಎ.ಎಸ್.ಐ., ಮಹದೇವಪುರ ಪೊಲೀಸ್ ಠಾಣೆ, ಬೆಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಚಂದ್ರಯ್ಯ, ಎ.ಎಸ್.ಐ ಮಹದೇವಪುರ ಪೊಲೀಸ್ ಠಾಣೆ ಆದ ನಿಮಗೆ ದಿನಾಂಕ: 05.05.2011 ರಂದು ಟ್ಯಾನರಿ ರಸ್ತೆ ಗಣೇಶ ಮೂರ್ತಿಗಳ ಬೃಹತ್ ಮೆರವಣಿಗೆ ಸಂಬಂಧದ ಬಂದೋಬಸ್ತು ಕರ್ತವ್ಯದಲ್ಲಿ ಕೆ.ಜಿ. ಹಳ್ಳಿ ಪೊಲೀಸ್ ಠಾಣೆ ವ್ಯಾಪ್ತಿಯ ಚಿಕ್ಕಣ್ಣ ಲೇಔಟ್ 1ನೇ ಮೈನ್, ಸಮೀವುಲ್ಲಾ ಎಂಬುವರು ಏರ್ಪಡಿಸಿದ್ದ ಗಣೇಶ ಮೂರ್ತಿಯ ಉಸ್ತುವಾರಿಗೆ ನೇಮಕ ಮಾಡಲಾಗಿತ್ತು, ಆ ದಿನ ಸಾಯಂಕಾಲ 4–25 ಗಂಟೆಯಲ್ಲಿ ಶ್ಯಾಂಪುರ ಮುಖ್ಯ ರಸ್ತೆದಯ ಮಸೀದಿಯ ಮುಂಭಾಗ ಬಂದಾಗ ಗಣೇಶ ಮೂರ್ತಿಯನ್ನು ತರುತ್ತಿದ್ದ ಗುಂಪಿನವರು ಜೋರಾಗಿ ತಮಟೆ ಬಾರಿಸುತ್ತಿದ್ದು, ಇದನ್ನು ಮುಸ್ಲಿಂ ಸಮುದಾಯದವರು ವಿರೋಧಿಸಿ ಎರಡು ಗುಂಪುಗಳ ನಡುವೆ ಘರ್ಷಣೆ ಸೃಷ್ಟಿಯಾಗುವ ಹಂತಕ್ಕೆ ತಲುಪಿದ್ದು, ಈ ಘಟನೆಯ ಸುಳಿವು ಪಡೆದ ಮೇಲ್ವಿಚಾರಣ ಅಧಿಕಾರಿಯಾಗಿದ್ದ ಶ್ರೀ ಎಸ್.ಎನ್. ಗಂಗಾಧರ್ ಎ.ಸಿ.ಪಿ. ಮಲ್ಲೇಶ್ವರಂ ಉಪ ವಿಭಾಗ ರವರು ತಕ್ಷಣ ಮಧ್ಯಪ್ರವೇಶಿಸಿ ಉಂಟಾಗಲಿದ್ದ ಗುಂಪು ಘರ್ಷಣೆಯನ್ನು ನಿಯಂತ್ರಿಸಿ ಗಣೇಶ ಮೂರ್ತಿಯ ಉಸ್ತುವಾರಿಗೆ ನೇಮಕ ಮಾಡಿದವರನ್ನು ಚೆಕ್ ಮಾಡಿದಾಗ ನೀವು ನೇಮಕ ಮಾಡಿದ ಗಣೇಶ ಮೂರ್ತಿಯ ವಾಹನದ ಬೆಂಗಾವಲು ಕರ್ತವ್ಯದಲ್ಲಿ ಹಾಜರಿರದೆ, ಸ್ಥಳದಿಂದ ಗೈರು ಹಾಜರಾಗಿದ್ದು ಕಂಡು ಬಂದಿರುತ್ತದೆ. ನೀವು ನಿಮಗೆ ನೇಮಕ ಮಾಡಿದ್ದ ಕರ್ತವ್ಯದಲ್ಲಿ ಹಾಜರಿದ್ದು, ಗಣೇಶ ಮೂರ್ತಿಯ ವಾಹನವನ್ನು ಸಮರ್ಪಕವಾಗಿ ಬೆಂಗಾವಲು ಮಾಡಿಕೊಂಡು ಕರೆತಂದಿದ್ದಲ್ಲಿ ಮಸೀದಿಯ ಮುಂಭಾಗ ತಮಟೆ ಬಾರಿಸಿ, ಈ ರೀತಿಯ ಅಹಿತಕರ ಘಟನೆಗಳಾಗದಂತೆ ನೋಡಿಕೊಳ್ಳಬಹುದಾಗಿತ್ತು. ನೀವು ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿ ಮತೀಯ ಸೂಕ್ಷ್ಮ ಪ್ರದೇಶದಲ್ಲಿ ಕರ್ತವ್ಯ ನಿರ್ವಹಿಸುವಾಗ್ಗೆ ಮೇಲಾಧಿಕಾರಿಗಳು ನೀಡುವ ಸೂಚನೆಗಳನ್ನು ತಿಳಿದುಕೊಂಡು ಎಚ್ಚರವಾಗಿ ಕರ್ತವ್ಯ ನಿರ್ವಹಿಸದೆ ಮೇಲಾಧಿಕಾರಿಗಳ ಸೂಚನೆಗಳನ್ನು ನಿರ್ಲಕ್ಷಿಸಿ, ನೇಮಿಸಿದ ಕರ್ತವ್ಯದಿಂದ ಗೈರು ಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಾ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 20.01.2012ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿ, ಅಮಾನತ್ತಿನಲ್ಲಿದ್ದ ದಿನಾಂಕ 13.09.2011 ರಿಂದ 31.10.2011 ರವರೆಗಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಕಮೀಷನರ್, ಆಡಳಿತ, ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 21.06.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುವುದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 113 ಪೊಸಿಅ 2012 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಚಂದ್ರಯ್ಯ, ಎ.ಎಸ್.ಐ., ಮಹದೇವಪುರ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1060

SC.30

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಪಿ.ಎಂ. ಹರೀಶ್ ಕುಮಾರ್, ಪಿಎಸ್‌ಐ, ಕೆ.ಆರ್. ಸಾಗರ ಪೊಲೀಸ್ ಠಾಣೆ, ಮಂಡ್ಯ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ಇವರ ಆದೇಶ ಸಂಖ್ಯೆ 57/ಪಿಆರ್/2011 (ಜಿ.ಆ. ಸಂಖ್ಯೆ: 37)/2012 ದಿನಾಂಕ 01.02.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಹಿಂಬರಹ ಸಂಖ್ಯೆ 49/ ಸಿಬ್ಬಂದಿ–2/2012–13 ದಿನಾಂಕ 16.10.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30.10.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)36/2012–13 ದಿನಾಂಕ: __04.2013 ಮತ್ತು 25.07.2013
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 116 ಸಿಎನ್‌ಎಸ್ 2013 ದಿನಾಂಕ: 21.09.2013

**ಪ್ರಸ್ತಾವನೆ:**

ಶ್ರೀ ಪಿ.ಎಂ. ಹರೀಶ್ ಕುಮಾರ್, ಪಿಎಸ್‌ಐ., ಕೆ.ಆರ್. ಸಾಗರ ಪೊಲೀಸ್ ಠಾಣೆ, ಮಂಡ್ಯ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಸಂಡೂರು ಪೊಲೀಸ್ ಠಾಣೆ, ಬಳ್ಳಾರಿ ಜಿಲೆಯಲ್ಲಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಗುನ್ನೆ ನಂ. 111/2011 ರ ಪ್ರಕರಣವನ್ನು ವಿಳಂಬವಾಗಿ ದಾಖಲು ಮಾಡಿ, ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 01.02.2012ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನದ ಮೇಲೆ ಪರಿಣಾಮ ಬೀರದಂತೆ ಸದರಿಯವರ ವಾರ್ಷಿಕ ವೇತನ ಬಡ್ತಿಯನ್ನು ಆರು (06) ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 16.10.2012ರ ಹಿಂಬರಹದಲ್ಲಿ ಮೇಲ್ಮನವಿಯನ್ನು ಕಾಲ ವಿಳಂಬಿತ ಮೇಲ್ಮನವಿ ಎಂದು ಪರಿಗಣಿಸಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಸದರಿಯವರು ಎಸಗಿರುವ ತಪ್ಪಿಗೆ ಶಿಕ್ಷೆಯು ಹೆಚ್ಚಾಗಿರುವುದರಿಂದ, ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ "ವಾಗ್ದಂಡನೆ" ವಿಧಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 115 ಪೊಸಿಅ 2012 ಬೆಂಗಳೂರು, ದಿನಾಂಕ: 26.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಎಂ. ಹರೀಶ್ ಕುಮಾರ್, ಪಿಎಸ್‌ಐ., ಕೆ.ಆರ್. ಸಾಗರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರವು ದಿನಾಂಕ: 01.02.2012ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 23(1)(a)(i)ರನ್ವಯ ಇವರಿಗೆ "ವಾಗ್ದಂಡನೆ" (censure) ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1058

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎನ್ ಶ್ರೀಹರ್ಷ, ಪಿ.ಐ., ಎ.ಪಿ.ಟಿ.ಎಸ್., ಯಲಹಂಕ, ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಕಮೀಷನರ್, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ ಡಿಇ(2)/ಸಿಓಪಿ/55/2009, ಬೆಂಗಳೂರು ದಿನಾಂಕ 29.07.2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ ಸಿಬಿ(8)19/2012–13 ದಿನಾಂಕ 14.06.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 20.10.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)19/2012–13 ದಿನಾಂಕ 07.02.2013 ಮತ್ತು 26.06.2013

**ಪ್ರಸ್ತಾವನೆ:**

ಶ್ರೀ ಎನ್ ಶ್ರೀಹರ್ಷ, ಪಿ.ಐ., ಎ.ಪಿ.ಟಿ.ಎಸ್., ಯಲಹಂಕ ಬೆಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಚಿಕ್ಕಜಾಲ ಪೊಲೀಸ್ ಠಾಣೆ, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ, ಬೇಜವಾಬ್ದಾರಿತನ ಮತ್ತು ಕರ್ತವ್ಯಲೋಪ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಶ್ರೀ ಶ್ರೀಹರ್ಷ, ಪಿ.ಐ., ಆದ ನೀವು ಚಿಕ್ಕಜಾಲ ಪೊಲೀಸ್ ಠಾಣೆ, ಬೆಂಗಳೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿಮ್ಮ ಪೊಲೀಸ್ ಠಾಣಾ ಸರಹದ್ದಿಗೆ ಸೇರಿದ ಬೆಂಗಳೂರು ಉತ್ತರ ತಾಲ್ಲೂಕು, ಜಾಲ ಹೊಬಳಿ, ಹುಣಸೂರು ಗ್ರಾಮದಲ್ಲಿ ದಿನಾಂಕ 28.12.2008ರಂದು ಮತ್ತು ಅಂದಿಗೆ ಸುಮಾರು 15ರಿಂದ 20 ದಿನಗಳ ಹಿಂದಿನಿಂದ ಕಾನೂನು ಬಾಹಿರವಾಗಿ ಸುಮಾರು 80 ಜನರು ಟಾರ್ಪಲ್‌ನಿಂದ ಟೆಂಟನ್ನು ಹಾಕಿಕೊಂಡು ಹಣ, ಒಡವೆ, ವಾಚುಗಳನ್ನು ಪಣವಾಗಿಟ್ಟುಕೊಂಡು ಅಂದರ್–ಬಾಹರ್ ಜೂಜಾಟವನ್ನು ಆಡುತ್ತಿದ್ದು, ಈ ಬಗ್ಗೆ ಮಾಹಿತಿ ಪಡೆದ ಸಿ.ಸಿ.ಬಿ. ಪೊಲೀಸ್ ಅಧಿಕಾರಿಗಳು ದಿನಾಂಕ 28.12.2008ರಂದು ಮಧ್ಯಾಹ್ನ 2.30 ಗಂಟೆಯಲ್ಲಿ ದಾಳಿ ಮಾಡಿ ಜೂಜಾಟವಾಡುತ್ತಿದ್ದ 20 ಜನರನ್ನು ದಸ್ತಗಿರಿ ಮಾಡಿ ಜೂಜಾಟಕ್ಕೆ ಬಳಸಲಾದ ಹಣ, ಒಡವೆ ಹಾಗು ವಾಹನಗಳನ್ನು ವಶಪಡಿಸಿಕೊಂಡಿರುತ್ತಾರೆ. ಇನ್ನೂ ಸುಮಾರು 50–60 ಜನ ಆರೋಪಿತರು ಸ್ಥಳದಿಂದ ಓಡಿಹೋಗಿ ತಪ್ಪಿಸಿಕೊಂಡಿರುತ್ತಾರೆ. ಈ ಬಗ್ಗೆ ಬೆಂಗಳೂರು ಅಂತರಾಷ್ಟ್ರೀಯ ಪೊಲೀಸ್ ಠಾಣೆಯ ಮೊ.ಸಂ.65/2008 ಕಲಂ 79, 80, ಕೆ.ಪಿ. ಆ್ಯಕ್ಟ್ ಅಡಿಯಲ್ಲಿ ಪ್ರಕರಣ ದಾಖಲಾಗಿರುತ್ತದೆ. ನೀವು ಜವಾಬ್ದಾರಿಯುತ ಪೊಲೀಸ್ ಇನ್ಸ್‌ಪೆಕ್ಟರ್ ಹಾಗೂ ಠಾಣಾಧಿಕಾರಿಯಾಗಿ ನಿಮ್ಮ ಠಾಣಾ ವ್ಯಾಪ್ತಿಯಲ್ಲಿ ಈ ರೀತಿ ಕಳೆದ 15–20 ದಿನಗಳಿಂದ ಕಾನೂನು ಬಾಹಿರವಾಗಿ ಜೂಜಾಟ ನಡೆಯುತ್ತಿದ್ದರೂ ಸಹ ಸೂಕ್ತ ಮಾಹಿತಿ ಸಂಗ್ರಹಿಸಿ, ದಾಳಿ ನಡೆಸಿ, ಅಪರಾಧ ನಿಯಂತ್ರಿಸುವಲ್ಲಿ ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ಕರ್ತವ್ಯ ಲೋಪವೆಸಗಿರುತ್ತೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಕಮೀಷನರ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 29.07.2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು (1) ವರ್ಷ ಕಾಲ ಮುಂದೂಡಲಾದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 14.06.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 121 ಪೊಸಿಅ 2012 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್‌ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್ ಶ್ರೀಹರ್ಷ, ಪಿ.ಐ., ಎ.ಪಿ.ಟಿ.ಎಸ್., ಯಲಹಂಕ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1056

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಯಲ್ಲಪ್ಪ ಹೆಚ್. ಕುರಿ, ಎಪಿಸಿ–158, ಡಿಎಆರ್, ಕೊಪ್ಪಳ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳ ಇವರ ಆದೇಶ ಸಂಖ್ಯೆ ಸಿಬ್ಬಂದಿ–4/ಶಿಕ್ಷೆ/193/2010, (ಆ.ಪು. ಸಂ.447/2011) ದಿನಾಂಕ 15.03.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/76/ಈವ/2011/1772 (ಆ.ಪು.ಸಂ. 227/ಈವ/2011) ದಿನಾಂಕ 08.05.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 22.12.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)70/2012–13 ದಿನಾಂಕ: 04.07.2013

**ಪ್ರಸ್ತಾವನೆ:**

ಶ್ರೀ ಯಲ್ಲಪ್ಪ ಹೆಚ್. ಕುರಿ, ಎಪಿಸಿ–158, ಡಿಎಆರ್ ಕೊಪ್ಪಳ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನಿಮಗೆ ಈ ಘಟಕದಿಂದ ಓ.ಓ.ಡಿ. ಮೇಲೆ ಎ.ಎನ್.ಎಫ್.ನ ಕಾರ್ಕಳ ಕ್ಯಾಂಪ್‌ನಲ್ಲಿ ಕರ್ತವ್ಯಕ್ಕಾಗಿ ನಿಯೋಜಿಸಿದ್ದು, ದಿನಾಂಕ 30.05.2010ರಿಂದ 07 ದಿವಸಗಳ ಮಾಸಿಕ ವಿಶ್ರಾಂತಿಯಲ್ಲಿ ತೆರಳಿ ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ ನೀವು ಸದರಿ ಕರ್ತವ್ಯಕ್ಕೆ ಹಾಜರಾಗದೇ ನಿಮ್ಮ ಇರುವಿಕೆಯ ಬಗ್ಗೆ ಮೇಲಾಧಿಕಾರಿಗಳಿಗೆ ಸಹ ಯಾವುದೇ ಮಾಹಿತಿಯನ್ನು ನೀಡದೇ ದಿನಾಂಕ 03.09.2010ರ ವರೆಗೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 15.03.2011ರ ಆದೇಶದಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಎರಡು (2) ವರ್ಷಗಳ ಕಾಲ ಮುಂದೂಡಿ, ದಿನಾಂಕ 06.06.2010ರಿಂದ 03.09.2010ರ ವರೆಗಿನ ಒಟ್ಟು 90 ದಿವಸಗಳವರೆಗೆ ಕರ್ತವ್ಯಕ್ಕೆ ಗೈರುಹಾಜರಾದ ಅವಧಿಯನ್ನು "ವೇತನ ರಹಿತ ರಜೆ" ಎಂದು ಪರಿಗಣಿಸಲಾಗಿದೆ

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 08.05.2012ರ ಆದೇಶದಲ್ಲಿ ಮೇಲ್ಮನವಿದಾರರಿಗೆ "ಛೀಮಾರಿ" ದಂಡನೆಯನ್ನು ವಿಧಿಸಿ, ಇವರು ಕರ್ತವ್ಯಕ್ಕೆ ಗೈರುಹಾಜರಾದ ಅವಧಿ ದಿನಾಂಕ 06.06.2010 ರಿಂದ 03.09.2010ರವರೆಗಿನ ಅವಧಿ ಒಟ್ಟು (90) ದಿನಗಳು ವೇತನ ರಹಿತ ರಜೆಯೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಮೇಲ್ಮನವಿ ಪ್ರಾಧಿಕಾರವು ಈಗಾಗಲೇ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸಿರುವುದರಿಂದ ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 127 ಪೊಸಿಅ 2012 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಯಲ್ಲಪ್ಪ ಹೆಚ್. ಕುರಿ, ಎಪಿಸಿ–158, ಡಿಎಆರ್ ಕೊಪ್ಪಳ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1048**
**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಅಂಬರೀಷ್, ಸಿಹೆಚ್‌ಸಿ–250, ಮದ್ದೂರು ಪೊಲೀಸ್ ಠಾಣೆ, ಮಂಡ್ಯ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ಇವರ ಆದೇಶ ಸಂಖ್ಯೆ ಸಿಬ್ಬಂದಿ(2)/ಪಿಆರ್/12/2011–12 (ಒ.ಬಿ. ಸಂಖ್ಯೆ: 104/11–12) ದಿನಾಂಕ 21.07.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ /ಅಪೀಲು/51/2011–12 (ಒ.ಬಿ. ಸಂಖ್ಯೆ 26/2012–13) ದಿನಾಂಕ 22.08.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 22.11.2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)56/2012–13 ದಿನಾಂಕ: 19.02.2013, 10.04.2013 ಮತ್ತು 20.06.2013

**ಪ್ರಸ್ತಾವನೆ:**

ಶ್ರೀ ಅಂಬರೀಷ್, ಸಿಹೆಚ್‌ಸಿ–250, ಮದ್ದೂರು ಪೊಲೀಸ್ ಠಾಣೆ, ಮಂಡ್ಯ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಅಂಬರೀಷ್, ಸಿ.ಹೆಚ್.ಸಿ.–150 ಆಗಿ ಮದ್ದೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನೀವು ದಿನಾಂಕ: 08.04.2011ರಂದು ಮದ್ದೂರು ಪೊಲೀಸ್ ಠಾಣೆಯ ರಾತ್ರಿ ಠಾಣಾಧಿಕಾರಿ ಕರ್ತವ್ಯಕ್ಕೆ ನೇಮಕವಾಗಿದ್ದು, ಆ ದಿವಸ ರಾತ್ರಿ ಮದ್ದೂರ ಪೊಲೀಸ್ ಠಾಣೆಯ ವ್ಯಾಪ್ತಿಯ ಚನ್ನಸಂದ್ರ ಗ್ರಾಮದ ಶ್ರೀ ಸಿ. ಹೆಚ್. ರವಿ ರವರು ಮನೆಯ ಹಿಂಬಾಗಿಲನ್ನು ಯಾರೋ ಕಳ್ಳರು ಯಾವುದೋ ಆಯುಧದಿಂದ ಮೀಟಿ ಮನೆಯೊಳಗೆ ಹೋಗಿ ಸಿ.ಹೆಚ್. ರವಿ ರವರ ಅತ್ತಿಗೆಯ ಕುತ್ತಿಗೆಯಲ್ಲಿದ್ದ ಚಿನ್ನದ ಮಾಂಗಲ್ಯದ ಚೈನನ್ನು ಕಿತ್ತುಕೊಂಡು ಹೋಗಿರುವ ವಿಚಾರವನ್ನು ದೂರವಾಣಿ ಮೂಲಕ ಮದ್ದೂರು ಠಾಣೆಯ ರಾತ್ರಿ ಠಾಣಾಧಿಕಾರಿ ಆಗಿದ್ದು ನಿಮಗೆ ತಿಳಿಸಿದ್ದರೂ ಸಹಾ ನೀವು ವಿಚಾರವನ್ನು ರಾತ್ರಿ ಗಸ್ತಿನ ಅಧಿಕಾರಿಗಳಿಗಾಲೀ, ಪಿ.ಎಸ್.ಐ. ರವರಿಗಾಗಲೀ ತಿಳಿಸದೇ, ಕೃತ್ಯ ನಡೆದ ಸ್ಥಳಕ್ಕೆ ಬೇಟಿ ನೀಡಿ ಕ್ರಮ ಕೈಗೊಳ್ಳದೆ ವಿಫಲರಾಗಿರುತ್ತೀರಿ. ಹೀಗೆ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ತೋರಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ಇವರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 21.07.2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ, ದಿನಾಂಕ 10.04.2011 ರಿಂದ 27.05.2011 ರವರೆಗೆ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22.08.2012ರ ಆದೇಶದಲ್ಲಿ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ, ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸಿ "ಛೀಮಾರಿ" ದಂಡನೆಯನ್ನು ವಿಧಿಸಿ ಅವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಈಗಾಗಲೇ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿರುವ ಕಾರಣ ಸದರಿ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 132 ಪೊಸಿಅ 2012 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಂಬರೀಷ್, ಸಿಹೆಚ್‌ಸಿ–250, ಮದ್ದೂರು ಪೊಲೀಸ್ ಠಾಣೆ, ಮಂಡ್ಯ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.1055
SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ ರಾಜು, ಎಪಿಸಿ–2152, ಸಿಎಆರ್ (ದಕ್ಷಿಣ), ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು–30 ಇವರ ಆದೇಶ ಸಂಖ್ಯೆ ಡಿಇ:4:2001–02 (ಒ.ಬಿ. ಸಂಖ್ಯೆ: 152:2002) ದಿನಾಂಕ 19.10.2002

2) ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ 3/ಅಪೀಲು/2003, ಬೆಂಗಳೂರು (ಒ.ಬಿ. ಸಂಖ್ಯೆ: 722/2003) ದಿನಾಂಕ 30.04.2003

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13.11.2012

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)60/2012–13 ದಿನಾಂಕ: 30.05.2013

**ಪ್ರಸ್ತಾವನೆ:**

ಶ್ರೀ ಕೆ ರಾಜು, ಎಪಿಸಿ–2152, **"ಹೆಚ್‌ಕ್ಯೂ"** ಪಂಗಡ, ಸಿಎಆರ್ (ದಕ್ಷಿಣ), ಆಡುಗೋಡಿ, ಬೆಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ಅಶಿಸ್ತು ಮತ್ತು ದುರ್ನಡತೆ ತೋರಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1. "ಎಪಿಸಿ 2152, ಕೆ.ರಾಜು, "ಹೆಚ್‌ಕ್ಯೂ" ಪಂಗಡ", ಸಿಎಆರ್(ದಕ್ಷಿಣ), ಆಡುಗೋಡಿ, ಬೆಂಗಳೂರು ಆದ ನಿಮ್ಮನ್ನು ಈ ಘಟಕದಿಂದ ನಗರದ ಪೊಲೀಸ್ ನಿಯಂತ್ರಣ ಕೊಠಡಿಯ ವಿಭಾಗದಲ್ಲಿ ದ್ವಿಚಕ್ರ ವಾಹನ ಚಾಲಕರಾಗಿ ಕರ್ತವ್ಯವನ್ನು ನಿರ್ವಹಿಸಲು ಕಳುಹಿಸಿಕೊಡಲಾಗಿತ್ತು. ಆದರೆ ನೀವು ದಿನಾಂಕ 12.08.2000 ದಿಂದ ಸದರಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ನಗರದ ವಿವೇಕನಗರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಕಾನೂನು ಬಾಹಿರ ಕೃತ್ಯವನ್ನುವೆಸಗಿ ಕರ್ತವ್ಯದಲ್ಲಿ ಅತೀವ ಅಶಿಸ್ತು ಮತ್ತು ದುರ್ನಡತೆಯನ್ನು ನೀವು ಪ್ರದರ್ಶಿಸಿರುತ್ತೀರಿ.
2. ಎಪಿಸಿ 2152, ಕೆ.ರಾಜು "ಹೆಚ್‌ಕ್ಯೂ" ಪಂಗಡ, ಸಿಎಆರ್(ದಕ್ಷಿಣ), ಆಡುಗೋಡಿ, ಬೆಂಗಳೂರು ಆದ ನೀವು ದಿನಾಂಕ 21.06.2000ದಂದು ಈ ಘಟಕದ ವಾಹನ ವಿಭಾಗದಲ್ಲಿ ಬೆಳಿಗ್ಗೆ 07.00 ಘಂಟೆಯಿಂದ ಸಂಜೆ 06.00 ಘಂಟೆಯವರೆಗೆ ಸ್ಟ್ಯಾಂಡ್–ಬೈ ಕರ್ತವ್ಯದಲ್ಲಿದ್ದು, ಕರ್ತವ್ಯವನ್ನು ಮುಗಿಸಿಕೊಂಡು ಹೋದ ನಂತರ ಅದೇ ದಿನ ರಾತ್ರಿ ಸುಮಾರು 09.00 ಘಂಟೆಯಲ್ಲಿ ಹೆಚ್‌ಎಎಲ್. ರಿಂಗ್ ರಸ್ತೆಯಲ್ಲಿ ಒಬ್ಬ ಸಾರ್ವಜನಿಕರು ಬರುತ್ತಿದ್ದ ಸ್ಯಾಂಟ್ರೋ ಕಾರ್ ನಂ.ಕೆಎ:05:ಜಡ್:342ನ್ನು ನಿಲ್ಲಿಸಿ ಅದರಲ್ಲಿದ್ದ ಡಾ॥ ಬಿ.ಆರ್.ಚೈತನ್ಯರವರೊಡನೆ ಪೊಲೀಸ್ ಅಧಿಕಾರಿಗಳೆಂದು ನಂಬಿಕೆ ಹುಟ್ಟಿಸಿ ಅವರ ಕಾರನ್ನು ಜಪ್ತಿ ಮಾಡಿ ಹಣದ ಕಳ್ಳತನದ ಬೆದರಿಕೆಯನ್ನು ಅವರ ಮೇಲಾಕಿ ಅವರನ್ನು ಹೊಡೆದು ಅವರ ಜೇಬಿಗೆ ಕೈ ಹಾಕಿ ಅದರಿಂದ ಏಳುನೂರು (700.00) ರೂಪಾಯಿಗಳನ್ನು ಕಿತ್ತು ಕೊಂಡ ಪರಿಣಾಮವಾಗಿ ನಿಮ್ಮ ವಿರುದ್ಧ ನಗರದ ವಿವೇಕನಗರದ ಪೊಲೀಸ್ ಠಾಣೆಯ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 99:2000, ಕಲಂ 419,420,384 ಮತ್ತು ಆರ್.ಡಬ್ಲ್ಯೂ–34, ಐ.ಪಿ.ಸಿ.ರಲ್ಲಿ ನಿಮ್ಮನ್ನು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಬಳಪಡಿಸಲಾಗಿರುತ್ತದೆ. ಶಿಸ್ತಿನ ಇಲಾಖೆಯಲ್ಲಿ ಸೇವೆಯನ್ನು ಸಲ್ಲಿಸುತ್ತಿರುವ ನೀವೇ ಕಾನೂನು ಬಾಹಿರ ಕರ್ತವ್ಯವನ್ನು ಎಸಗಿ ಅತೀವ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.
3. ಎಪಿಸಿ 2152, ಕೆ.ರಾಜ, "ಹೆಚ್‌ಕ್ಯೂ" ಪಂಗಡ, ಸಿಎಆರ್(ದಕ್ಷಿಣ), ಆಡುಗೋಡಿ, ಬೆಂಗಳೂರು ಆದ ನೀವು ದಿನಾಂಕ 21.06.2000ದಂದು ಈ ಘಟಕದ ವಾಹನ ವಿಭಾಗದಲ್ಲಿ ಸ್ಟ್ಯಾಂಡ್–ಬೈ ಕರ್ತವ್ಯವನ್ನು ನಿರ್ವಹಿಸಿಕೊಂಡು ಹೋದ ನಂತರ ಅದೇ ದಿನ ರಾತ್ರಿ 09.00 ಘಂಟೆಯ ಸಮಯದಲ್ಲಿ ಈ ಘಟಕದ ನಿವೃತ್ತ ಪೇದೆ ಸಂಖ್ಯೆ: 2103, ವಿಜಯಕುಮಾರ್‌ರವರೊಡನೆ ಕೂಡಿ ಎಚ್.ಎ.ಎಲ್. ರಿಂಗ್ ರಸ್ತೆಯಲ್ಲಿ ನಡೆಸಿದ ಕೃತ್ಯದಲ್ಲಿ ಭಾಗಿಯಾಗಿದ್ದರಿಂದ ನಿಮ್ಮ ವಿರುದ್ಧ ವಿವೇಕನಗರ ಪೊಲೀಸ್ ಠಾಣೆಯ ಕ್ರಿಮಿನಲ್ ಮೊಕದ್ದಮೆಯು ದಾಖಲಾಗಿರುವುದರಿಂದ ಹಾಗೂ ದಿನಾಂಕ 12.08.2000ದಂದು ನಿಮ್ಮನ್ನು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುವುದರಿಂದ ನಿಮ್ಮನ್ನು ದಿನಾಂಕ 12.08.2000ದಿಂದ ಅಮಾನತ್ತುಗೊಳಿಸಲಾಗಿದೆ.

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ), ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19.10.2002ರ ಆದೇಶದಲ್ಲಿ ಅರ್ಜಿದಾರನ್ನು ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆ ಮಾಡಿ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಂದರೆ 12.08.2000 ರಿಂದ ಆದೇಶ ಸ್ವೀಕರಿಸುವ ದಿನಾಂಕದವರೆಗೆ ಅಮಾನತ್ತಿನಲ್ಲಿ ಕಳೆದ ದಿನಗಳೆಂದೇ ಪರಿಗಣಿಸಿರುತ್ತಾರೆ. ಮುಂದುವರೆದು ಅರ್ಜಿದಾರರು ಪಡೆಯುತ್ತಿರುವ ವೇತನವನ್ನು ಪೇದೆ ಹುದ್ದೆಯ ಕನಿಷ್ಟ ವೇತನಕ್ಕೆ 5 (ಐದು) ವರ್ಷ ಕಾಲ ಇಳಿಸಿ, ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 30.04.2003ರ ಆದೇಶದಲ್ಲಿ ಅರ್ಜಿದಾರರ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅಧಿಕಾರ ದುರುಪಯೋಗ ಪಡಿಸಿಕೊಂಡು ದರೋಡೆಯಂತಹ ಪ್ರಕರಣದಲ್ಲಿ ಭಾಗಿಯಾಗಿ ಕರ್ತವ್ಯದಲ್ಲಿ ಅತೀವ ಅಶಿಸ್ತು ಮತ್ತು ದುರ್ನಡತೆ ತೋರಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 138 ಪೊಸಿಇ 2012 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ ರಾಜು, ಎಪಿಸಿ–2152, **"ಹೆಚ್‌ಕ್ಯೂ"** ಪಂಗಡ, ಸಿಎಆರ್ (ದಕ್ಷಿಣ), ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1052**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ ಎಸ್ ಶಿವಣ್ಣ, ಹೆಚ್‌ಸಿ–2187, ಪರಪ್ಪನ ಅಗ್ರಹಾರ ಪೊಲೀಸ್ ಠಾಣೆ, ಬೆಂಗಳೂರು ನಗರ ಮತ್ತು ಶ್ರೀ ದೇವರಾಜಯ್ಯ, ಪಿಸಿ–9400, ಬಾಗಲೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ 08/ಡಿಇ/ಆರ್–6/ಪೂ/2008 ದಿನಾಂಕ 04.01.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ 02/ಅಪೀಲು–1/2011 ದಿನಾಂಕ 26.05.02011
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 28.11.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)61/2012–13 ದಿನಾಂಕ: 10.07.2013

**ಪ್ರಸ್ತಾವನೆ:**

ಶ್ರೀ ಕೆ.ಎಸ್.ಶಿವಣ್ಣ, ಹೆಚ್‌ಸಿ–2187, ಪರಪ್ಪನ ಅಗ್ರಹಾರ ಪೊಲೀಸ್ ಠಾಣೆ ಬೆಂಗಳೂರು ನಗರ ಮತ್ತು ಶ್ರೀ ದೇವರಾಜಯ್ಯ, ಪಿಸಿ–9400, ಬಾಗಲೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಇವರುಗಳು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಬಾಣಸವಾಡಿ ಪೊಲೀಸ್ ಠಾಣೆ, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅಶಿಸ್ತು, ಅಧಿಕಾರ ದುರುಪಯೋಗ ಮತ್ತು ಘೋರ ದುರ್ನಡತೆ ತೋರಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ

**ದೋಷಾರೋಪಣೆ:–**

(1) ಶ್ರೀ ಕೆ.ಎಸ್.ಶಿವಣ್ಣ, ಹೆಚ್‌ಸಿ–2187, ಬಾಣಸವಾಡಿ ಪೊಲೀಸ್ ಠಾಣೆ, ಹಾಲಿ ಪರಪ್ಪನ ಅಗ್ರಹಾರ ಪೊಲೀಸ್ ಠಾಣೆ, ಬೆಂಗಳೂರು ನಗರ, (2) ಶ್ರೀ ದೇವರಾಜಯ್ಯ, ಪಿಸಿ–9400, ಬಾಣಸವಾಡಿ ಪೊಲೀಸ್ ಠಾಣೆ, ಹಾಲಿ ಬಾಗಲೂರು ಪೊಲೀಸ್ ಠಾಣೆ, ಬೆಂಗಳೂರು ನಗರ ನೀವು ಬಾಣಸವಾಡಿ ಪೊಲೀಸ್ ಠಾಣೆಯ ಅಪರಾಧ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ 04.11.2008ರಂದು ಸಂಜೆ ಮೋಟಾರ್ ಸೈಕಲ್ ನಂ. ಕೆಎ03–1484ರಲ್ಲಿ ಕೆ.ಆರ್.ಪುರ ಪೊಲೀಸ್ ಠಾಣಾ ವ್ಯಾಪ್ತಿಯ ಮನೆ ನಂ.20, 8ನೇ ಕ್ರಾಸ್, ಸೆಂಟ್ ಆನ್ಸ್ ಸ್ಕೂಲ್ ರಸ್ತೆ, ಆರ್.ಎಂ.ನಗರ, ಬೆಂಗಳೂರು ನಗರ ಇಲ್ಲಿ ವೇಶ್ಯಾವಾಟಿಕೆ ನಡೆಯುತ್ತಿರುವ ವಿಚಾರ ತಿಳಿದು, ನೀವಿಬ್ಬರೂ ಅಲ್ಲಿಗೆ ಹೋಗಿ ವೇಶ್ಯಾವಾಟಿಕೆ ನಡೆಸುತ್ತಿದ್ದ ಶ್ರೀಮತಿ ಮೇರಿ ಬಲ್ಸಿನಾರವರನ್ನು ಸಂಪರ್ಕಿಸಿ ಅವರಿಂದ ವೇಶ್ಯಾವಾಟಿಕೆ ನಡೆಸಿದ್ದಕ್ಕೆ ಪ್ರತಿಯಾಗಿ ಅಕ್ರಮ ಸಂಭಾವನೆಯಾಗಿ ರೂ.3,000/– (ಮೂರು ಸಾವಿರ) ಪಡೆದಿರುವುದು ತಿಳಿದು ಬಂದಿರುತ್ತದೆ. ನೀವು ಶಿಸ್ತಿನ ಇಲಾಖೆಯ ನೌಕರರಾಗಿ ವೇಶ್ಯಾವಾಟಿಕೆ ನಡೆಸುತ್ತಿರುವ ಮಾಹಿತಿಯನ್ನು ಮೇಲಾಧಿಕಾರಿಗಳಿಗೆ ತಿಳಿಸಿ ಕಾನೂನು ರೀತ್ಯ ಕ್ರಮ ಜರುಗಿಸದೆ, ನಿಮ್ಮ ಅಧಿಕಾರ ವ್ಯಾಪ್ತಿಗೆ ಒಳಪಡದ ಕೆ.ಆರ್.ಪುರ ಪೊಲೀಸ್ ಠಾಣಾ ವ್ಯಾಪ್ತಿಗೆ ಹೋಗಿ ವೇಶ್ಯಾವಾಟಿಕೆ ನಡೆಸುತ್ತಿದ್ದ ಆರೋಪಿತಳೊಂದಿಗೆ ಶಾಮೀಲಾಗಿ ಆರೋಪಿತಳಿಂದ ಅಕ್ರಮ ಸಂಭಾವನೆಯನ್ನು ಪಡೆದು ನಿಮ್ಮ ಕರ್ತವ್ಯದಲ್ಲಿ ತೀವ್ರತರನಾದ ಅಶಿಸ್ತು ಮತ್ತು ಸೇವಾ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರೆಂದು ಆರೋಪಿಸಲಾಗಿದೆ".

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರುಗಳು ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 04.01.2011ರ ಆದೇಶದಲ್ಲಿ ಅರ್ಜಿದಾರರುಗಳಿಗೆ ಕರ್ನಾಟಕ ಪೊಲೀಸ್ ಕಾಯ್ದೆ ಕಲಂ 23(1)(a)(ii) ರೀತ್ಯಾ ಮುಂದಿನ ಎರಡು ವರ್ಷಗಳ ವಾರ್ಷಿಕ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ *(with permanent effect)* ಮುಂದೂಡಿ ಅವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರುಗಳ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 26.05.2011ರ ಆದೇಶದಲ್ಲಿ ಅರ್ಜಿದಾರರುಗಳ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸಿ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ 2 ವರ್ಷಗಳ ಕಾಲ ಮುಂದೂಡಿ, ಇವರುಗಳ ಅಮಾನತ್ತಿನ ಅವಧಿಯನ್ನು ಖಾತೆಯಲ್ಲಿ ಲಭ್ಯವಿರುವ ರಜೆಯನ್ನಾಗಿ ಪರಿಗಣಿಸಲು ಆದೇಶಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅಧಿಕಾರ ದುರುಪಯೋಗ ಪಡಿಸಿಕೊಂಡು, ತಮ್ಮ ಅಧಿಕಾರ ವ್ಯಾಪ್ತಿಗೆ ಒಳಪಡದೆ ಇರುವ ಸ್ಥಳಕ್ಕೆ ಹೋಗಿ ವೇಶ್ಯಾವಾಟಿಕೆ ನಡೆಸುತ್ತಿದ್ದ ಆರೋಪಿಗಳೊಂದಿಗೆ ಶಾಮೀಲಾಗಿ ಅಕ್ರಮ ಸಂಭಾವನೆ ಪಡೆದು, ಕರ್ತವ್ಯದಲ್ಲಿ ಅಶಿಸ್ತು, ದುರ್ನಡತೆ ಎಸಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿದ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 140 ಪೊಸಿಅ 2012 ಬೆಂಗಳೂರು, ದಿನಾಂಕ: 20.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ ಎಸ್ ಶಿವಣ್ಣ, ಹೆಚ್‌ಸಿ–2187, ಪರಪ್ಪನ ಅಗ್ರಹಾರ ಪೊಲೀಸ್ ಠಾಣೆ, ಬೆಂಗಳೂರು ನಗರ ಮತ್ತು ಶ್ರೀ ದೇವರಾಜಯ್ಯ, ಪಿಸಿ–9400, ಬಾಗಲೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.1049**

**SC.30**

## ಇಂಧನ ಸಚಿವಾಲಯ

**ವಿಷಯ:** ಮೆ:: ಜಿವಿಪಿ ಇನ್ಫ್ರಾ ಪ್ರಾಜೆಕ್ಟ್ ಪ್ರೈ.ಲಿ., ಕಂಪನಿಯವರಿಗೆ ಹಂಚಿಕೆಯಾಗಿರುವ 15 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆ ಅನುಷ್ಠಾನಕ್ಕೆ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಇಎನ್ 289 ಎನ್‌ಸಿಇ 2006 ದಿನಾಂಕ: 16.10.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 186 ಎನ್‌ಸಿಇ 2007 ದಿನಾಂಕ: 30.05.2007.

3) ತಿದ್ದುಪಡಿ ಆದೇಶ ಸಂಖ್ಯೆ:ಇಎನ್ 332 ಎನ್‌ಸಿಇ 2007 ದಿನಾಂಕ :13.09.2007.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್.ಹೆಚ್.–247/Yennehole-I MHS/2012/1773 ದಿನಾಂಕ:27/28.06.2012.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ: ಕೆ. ಗಂಗಾ ಪ್ರಸಾದ ರವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ತಲ್ಲಾರು ಗ್ರಾಮದ ಬಳಿ ಸ್ವರ್ಣ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಎಣ್ಣೆಹೊಳೆ–1 ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಈ ಯೋಜನೆಯ ಸಾಮರ್ಥ್ಯವನ್ನು 4.00 ಮೆ.ವ್ಯಾ.ನಿಂದ 15 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು. ಹಾಗೂ ಈ ಯೋಜನೆಯನ್ನು ಸದರಿ ಕಂಪನಿಯ Sister Concern ಕಂಪನಿಯಾದ ಮೆ : ಜಿವಿಪಿ ಇನ್ಫ್ರಾ ಪ್ರಾಜೆಕ್ಟ್ ಪ್ರೈ.ಲಿ., ರವರ ಹೆಸರಿನಲ್ಲಿ ಅನುಷ್ಠಾನಗೊಳಿಸಲು ಅನುಮತಿಸಲಾಗಿತ್ತು.

ಮೇಲ್ಕಂಡ ಆದೇಶಗಳಲ್ಲಿ ನಮೂದಿಸಿದ್ದ "ತಲ್ಲಾರು ಗ್ರಾಮ" ಎಂಬುದನ್ನು " ಜಾರ್ಕಳ ಗ್ರಾಮ" ಎಂದು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ತಿದ್ದುಪಡಿ ಮಾಡಲಾಗಿತ್ತು. ಈ ಯೋಜನೆಯ ಅನುಷ್ಠಾನದ ಕಾಲಾವಧಿಯು ದಿನಾಂಕ :20.04.2012ಕ್ಕೆ ಮುಗಿದಿರುತ್ತದೆ.

ಮೇಲಿನ ಯೋಜನೆಗೆ ಸಂಬಂಧಿಸಿದಂತೆ ಯೋಜನಾ ಅಭಿವೃದ್ಧಿದಾರರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮಂಜೂರಾತಿಯನ್ನು ಹೊರತುಪಡಿಸಿ ಉಳಿದೆಲ್ಲಾ ಇಲಾಖೆಗಳಿಂದ ಅವಶ್ಯವಿರುವ ಅನುಮತಿಗಳನ್ನು ಪಡೆದಿರುತ್ತಾರೆಂದು ಮತ್ತು ಕಾಮಗಾರಿಯನ್ನು ಪ್ರಾರಂಭಿಸಿರುತ್ತಾರೆಂದು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ವರದಿ ಮಾಡುತ್ತಾ, ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸಲು ಆಸಕ್ತಿ ಹೊಂದಿರುವುದರಿಂದ ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ :21.04.2012 ರಿಂದ 20.04.2014ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 192 ಎನ್‌ಸಿಇ 2012, ಬೆಂಗಳೂರು, ದಿನಾಂಕ:19.07.2012**

ಮೆ : ಜಿವಿಪಿ ಇನ್ಫ್ರಾ ಪ್ರಾಜೆಕ್ಟ್ ಪ್ರೈ.ಲಿ., ಕಂಪನಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಜಾರ್ಕಳ ಗ್ರಾಮದ ಬಳಿ ಸ್ವರ್ಣ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 15 ಮೆಗಾ ವ್ಯಾಟ್ ಸಾಮರ್ಥ್ಯದ ಎಣ್ಣೆಹೊಳೆ–1 ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಪ್ರತಿ ಮೆ.ವ್ಯಾ.ಗೆ 3 ಲಕ್ಷಗಳ ನೆರವೇರಿಕೆ ಖಾತರಿ (Performance guarantee)ಯನ್ನು ಕ್ರೆಡಲ್ ಗೆ ನೀಡತಕ್ಕದ್ದೆಂಬ ಷರತ್ತಿಗೊಳಪಟ್ಟು ದಿನಾಂಕ :21.04.2012 ರಿಂದ 20.04.2014ರವರೆಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**PR.963**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಕ್ರಮ್ ಶ್ರೀರಾಮ ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಭರಚುಕ್ಕಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆ.ಆರ್.ಇ.ಡಿ./06/SH-837/Barachukki MHS/2012/146 ದಿನಾಂಕ: 04.01.2013

2. ದಿನಾಂಕ: 11.3.2013ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ವಿಕ್ರಮ್ ಶ್ರೀರಾಮ್ ರವರಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಶಿವನಸಮುದ್ರಂ ಗ್ರಾಮದ ಸಮೀಪದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಭರಚುಕ್ಕಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆಗಾಗಿ ತಾಂತ್ರಿಕ ಮಾಹಿತಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ವಿಕ್ರಮ್ ಶ್ರೀರಾಮ್ ರವರಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಶಿವನಸಮುದ್ರಂ ಗ್ರಾಮದ ಸಮೀಪದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬರಚುಕ್ಕಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಕುರಿತು ಸಮಿತಿಯು ಕೂಲಂಕಷವಾಗಿ ಪರಿಶೀಲಿಸಿ, ಈಗಾಗಲೇ ಕೆಳತೊರೆಯಲ್ಲಿ ಹಂಚಿಕೆಯಾಗಿರುವ ಮೆ: ವಿಜಯ ಗ್ರೀನ್ ಪವರ್ ಪ್ರೈ.ಲಿ., ರವರ ಯೋಜನೆಗೆ ದಕ್ಕೆ ಬಾರದಂತೆ ಅನುಷ್ಠಾನಗೊಳಿಸಬೇಕೆಂಬ ಷರತ್ತಿಗೊಳಪಟ್ಟು ಯೋಜನೆಯ ಹಂಚಿಕೆಗೆ ಅನುಮೋದಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 20 ಎನ್‌ಸಿಇ 2013, ಬೆಂಗಳೂರು, ದಿನಾಂಕ: 21.05.2013.**

ಮೆ: ವಿಕ್ರಮ್ ಶ್ರೀರಾಮ್ ರವರಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಶಿವನಸಮುದ್ರಂ ಗ್ರಾಮದ ಸಮೀಪದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬರಚುಕ್ಕಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈಗಾಗಲೇ ಕೆಳತೊರೆಯಲ್ಲಿ ಹಂಚಿಕೆಯಾಗಿರುವ ಮೆ: ವಿಜಯ ಗ್ರೀನ್ ಪವರ್ ಪ್ರೈ.ಲಿ., ರವರ ಯೋಜನೆಗೆ ದಕ್ಕೆ ಬಾರದಂತೆ ಈ ಕೆಳಗಿನ ಭೌಗೋಳಿಕ ಸ್ಥಳದಲ್ಲಿ ಅನುಷ್ಠಾನಗೊಳಿಸುವ ಹಾಗೂ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ :–

| | Latitude | Longitude |
|---|---|---|
| Weir | 12°16'59.24''N | 77°10'34.65 ''E |
| Power House | 12°17'33''N | 77°10'58.27 ''E |
| FRL | EL 588 M | |
| TWL | EL 526M | |

1 ಈ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ:19.01.2010 ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ 17.8.2011ರಲ್ಲಿ ನೀಡಿರುವ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

2 ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ :ಇಎನ್ 435 ಎನ್‌ಸಿಇ 2011 ದಿನಾಂಕ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

3 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

4 ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣಾ ಶುಲ್ಕವನ್ನು ತುಂಬುವುದು.

5 ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

6 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

7 ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಅಥವಾ ಸರ್ಕಾರದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12 ಈ ಯೋಜನೆಯನ್ನು ಅನುಷ್ಠಾನಗೊಳಿಸಿ ವಿದ್ಯುತ್ ಜಾಲಕ್ಕೆ ಜೋಡಣೆ ಮಾಡದ ಹೊರತು ವರ್ಗಾವಣೆ ಪ್ರಸ್ತಾವನೆಯನ್ನು ಪರಿಗಣಿಸುವುದಿಲ್ಲ.

13 ಸರ್ಕಾರಿ ಆದೇಶ ಸಂ: ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು

14 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1019**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ॥ ಪ್ರಭಾಕರ್ ಪವರ್ ಪ್ರಾಜೆಕ್ಟ್ ಲಿಮಿಟೆಡ್ ರವರ 5 ಮೆ.ವ್ಯಾ. ಸಾಮರ್ಥ್ಯದ ನಾರಾಯಣಪುರ ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 125 ಎನ್‌ಸಿಇ 1996(14) ದಿನಾಂಕ: 10.06.1997.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 369 ಎನ್‌ಸಿಇ 2004 ದಿನಾಂಕ: 08.12.2004.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 363 ಎನ್‌ಸಿಇ 2004 ದಿನಾಂಕ: 05.1.2005.

4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 363 ಎನ್‌ಸಿಇ 2004 ದಿನಾಂಕ: 08.6.2005.

5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 370 ಎನ್‌ಸಿಇ 2011 ದಿನಾಂಕ: 24.09.2012.

6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿಎಲ್/06/SH–233/2012–13/265 ದಿನಾಂಕ: 02.02.2013.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 10.6.1997ರ ಆದೇಶದಲ್ಲಿ ಮೆ:: ಎ. ಪ್ರಭಾಕರ ರೆಡ್ಡಿ & ಕಂಪನಿ, ಹೈದರಾಬಾದ್ ಇವರಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಡ್ಯಾಂ ರೊಡಾಲ್‌ಬಂಡಾ ಬಳಿ 5.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಸದರಿ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ರದ್ದುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ : ಸ್ವಾರ್ತ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಅಣೆಕಟ್ಟಿನಲ್ಲಿ ರೊಡಾಲ್‌ಬಂಡಾ ಬಳಿ 5.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಮೆ : ಸ್ವಾರ್ತ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆ ಮಾಡಲಾದ ಸದರಿ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ರದ್ದುಗೊಳಿಸಿ, ಮೆ:: ಎ. ಪ್ರಭಾಕರ ರೆಡ್ಡಿ & ಕಂಪನಿ, ಹೈದರಾಬಾದ್ ರವರಿಗೆ ಹಿಂದಿರುಗಿಸಿ, ಇವರಿಗೆ ದಿನಾಂಕ 10.6.1997ರಂದು ಹಂಚಿಕೆಯಾಗಿದ್ದ ಮೂಲ ಆದೇಶವನ್ನು ಉಳಿಸಿಕೊಳ್ಳಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೆ:: ಪ್ರಭಾಕರ್ ಪವರ್ ಪ್ರಾಜೆಕ್ಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಡ್ಯಾಂ ರೊಡಾಲ್ ಬಂಡಾ ಬಳಿ ಮಂಜೂರು ಮಾಡಿರುವ 5.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ 06.5.2011 ರಿಂದ **ದಿನಾಂಕ : 05.05.2013 ರವರೆಗೆ** ವಿಸ್ತರಿಸಿ ಆದೇಶಿಸಲಾಗಿತ್ತು.

ಅಭಿವೃದ್ಧಿದಾರರು ದಿನಾಂಕ :09.10.2012 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ತಮ್ಮ ಯೋಜನೆಗೆ ಅಂತಿಮವಾಗಿ KBJNL ಸಂಸ್ಥೆಯು ದಿನಾಂಕ :21.04.2012 ರಂದು ಅನುಮತಿ ನೀಡಿರುವುದರಿಂದ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ತಮ್ಮ ಯೋಜನೆಗೆ ಆ ದಿನಾಂಕದಿಂದ 24 ತಿಂಗಳ ಕಾಲಾವಧಿ ವಿಸ್ತರಿಸುವಂತೆ ಕೋರಿರುತ್ತಾರೆ. ಈ ಬಗ್ಗೆ KREDL ನ ವ್ಯ.ನಿ., ರವರ ಅಭಿಪ್ರಾಯ ಪಡೆಯಲಾಗಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಪ್ರಭಾಕರ್ ಪವರ್ ಪ್ರಾಜೆಕ್ಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಡ್ಯಾಂ ರೊಡಾಲ್ ಬಂಡಾ ಬಳಿ ಹಂಚಿಕೆಯಾಗಿರುವ 5.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ಮಾನ್ಯ ಉಚ್ಚ ನ್ಯಾಯಾಲಯದ ದಿನಾಂಕ :05.03.2009ರ ಆದೇಶದ ಹಿನ್ನಲೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತರವರು ಅನುಮೋದನೆ ನೀಡಿದ್ದ ದಿನಾಂಕವನ್ನು ಗಮನದಲ್ಲಿಟ್ಟುಕೊಂಡು ಅಂತಿಮ ಅನುಮೋದನೆ ನೀಡಿದ ದಿನಾಂಕ :21.04.2012 ರಿಂದ 24 ತಿಂಗಳ ಕಾಲಾವಕಾಶವನ್ನು ಯೋಜನೆ ಅನುಷ್ಠಾನಕ್ಕೆ ವಿಸ್ತರಿಸಿ ಸರ್ಕಾರದ ದಿನಾಂಕ :24.09.2012ರ ಆದೇಶಕ್ಕೆ ತಿದ್ದುಪಡಿ ಮಾಡಬಹುದೆಂದು ಅಭಿಪ್ರಾಯ ನೀಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೆ:: ಪ್ರಭಾಕರ್ ಪವರ್ ಪ್ರಾಜೆಕ್ಟ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿರುವ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ದಿನಾಂಕ :06.05.2011 ರಿಂದ 05.05.2013 ರವರೆಗೆ ಕಾಲಾವಧಿ ವಿಸ್ತರಿಸಿ ಹೊರಡಿಸಲಾಗಿದ್ದ ಸರ್ಕಾರದ ಆದೇಶ ಸಂಖ್ಯೆ :ಇಎನ್ 370 ಎನ್‌ಸಿಇ 2011 ದಿನಾಂಕ :24.09.2012 ನ್ನು ಹಿಂಪಡೆದು, ಪ್ರತ್ಯೇಕ ಆದೇಶ ಹೊರಡಿಸಲು ಸರ್ಕಾರ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 370 ಎನ್‌ಸಿಇ 2011, ಬೆಂಗಳೂರು, ದಿನಾಂಕ: 09.05.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಮೆ:: ಪ್ರಭಾಕರ್ ಪವರ್ ಪ್ರಾಜೆಕ್ಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಡ್ಯಾಂ ರೋಡಾಲ್‌ಬಂಡಾ ಬಳಿ ಮಂಜೂರು ಮಾಡಿರುವ 5.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ದಿನಾಂಕ: 21.04.2012 ರಿಂದ 24 ತಿಂಗಳು ಕಾಲಾವಧಿಯನ್ನು ನೀಡಲಾಗಿದೆ.

ಈ ಕುರಿತು ಹೊರಡಿಸಲಾಗಿದ್ದ ಸರ್ಕಾರದ ಆದೇಶ ಸಂಖ್ಯೆ: ಇಎನ್ 370 ಎನ್‌ಸಿಇ 2011 ದಿನಾಂಕ:24.09.2012 ನ್ನು ಈ ಮೂಲಕ ರದ್ದುಪಡಿಸಲಾಗಿದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ.

**PR.1013**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಕಾರ್ತಿಕ ಹೈಡ್ರೋ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಶಿರೋಳ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆ.ಆರ್.ಇ.ಡಿ./06/SH-800(a)/2011–12/719 ದಿನಾಂಕ: 06.03.2012 ಮತ್ತು ಕೆ.ಆರ್.ಇ.ಡಿ./06/SH-800A/Shirol MHS/2013/1614 ದಿನಾಂಕ: 11.03.2013.
2. ದಿನಾಂಕ: 11.3.2013ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಕಾರ್ತಿಕ ಹೈಡ್ರೋ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಗದಗ ಜಿಲ್ಲೆಯ ನರಗುಂದ ತಾಲ್ಲೂಕಿನ ಶಿರೋಳ್ ಗ್ರಾಮದ ಬಳಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಶಿರೋಳ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆಗಾಗಿ ತಾಂತ್ರಿಕ ಮಾಹಿತಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಂತೆ ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ: ಕಾರ್ತಿಕ ಹೈಡ್ರೋ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಅನುಮತಿ ನೀಡಲು ಸಮಿತಿಯು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 117 ಎನ್‌ಸಿಇ 2013, ಬೆಂಗಳೂರು, ದಿನಾಂಕ: 27.05.2013**

ಮೆ: ಕಾರ್ತಿಕ ಹೈಡ್ರೋ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಗದಗ ಜಿಲ್ಲೆಯ ನರಗುಂದ ತಾಲ್ಲೂಕಿನ ಶಿರೋಳ್ ಗ್ರಾಮದ ಬಳಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಶಿರೋಳ್ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಭೌಗೋಳಿಕ ಸ್ಥಳದಲ್ಲಿ ಸ್ಥಾಪಿಸಲು ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ :–

| | Latitude | Longitude |
|---|---|---|
| Weir | 15°50’08’’ | 75°32’39 ’’ |
| Power House | 15°50’00’’ | 75°32’48 ’’ |
| FRL | EL 541 M | |
| TWL | EL 534.5 M | |

1 ಈ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ:19.01.2010 ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ 17.8.2011ರ ನೀಡಿರುವ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

2 ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ :ಇಎನ್ 435 ಎನ್‌ಸಿಇ 2011 ದಿನಾಂಕ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿ

ಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

3 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

4 ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣಾ ಶುಲ್ಕವನ್ನು ತುಂಬುವುದು.

5 ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

6 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

7 ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಅಥವಾ ಸರ್ಕಾರದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12 ಸರ್ಕಾರಿ ಆದೇಶ ಸಂ: ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

13 ಯೋಜನೆಯನ್ನು ಅನುಷ್ಠಾನಗೊಳಿಸಿ ವಿದ್ಯುತ್ ಜಾಲಕ್ಕೆ ಜೋಡಣೆ ಮಾಡಿದ ನಂತರವಷ್ಟೇ ವರ್ಗಾವಣೆ ಪ್ರಸ್ತಾವನೆಯನ್ನು ಪರಿಗಣಿಸಲಾಗುವುದು.

14 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1024**
**SC.25**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:–** ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಅನುಷ್ಠಾನಗೊಳಿಸುತ್ತಿರುವ ರಾಜ್ಯದ **"ಹೆಚ್ಚುವರಿ ಭೋಜನಾ ವೆಚ್ಚ"** ಕಾರ್ಯಕ್ರಮಕ್ಕೆ ಬದಲಾಗಿ **"ಊಟ ಮತ್ತು ವಸತಿ ಸಹಾಯ ಯೋಜನೆ"** ಕಾರ್ಯಕ್ರಮ ಮಂಜೂರಾತಿ ಹಾಗೂ ಅನುಷ್ಠಾನದ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:–**

1. ಸರ್ಕಾರಿ ಆದೇಶ ಸಂಖ್ಯೆ:ಎಸ್‌ಡಬ್ಲ್ಯುಎಲ್ 115 ಬಿಎಂಎಸ್ 79, ದಿ.25.12.79
2. ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯುಎಲ್ 22 ಬಿಪಿಎಸ್, ದಿ.10.10.1990
3. ಸರ್ಕಾರಿ ಆದೇಶ ಸಂಖ್ಯೆ:ಸಕಕಾ 22 ಬಿಪಿಎಸ್ 89, ದಿ.31.01.1990
4. ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯುಎಲ್ 53 ಬಿಪಿಎಸ್ 91, ದಿ.30.08.1991 ಮತ್ತು 06.01.1992
5. ಸರ್ಕಾರಿ ಆದೇಶ ಸಂಖ್ಯೆ: ಸಕಇ 100 ಬಿಎಂಎಸ್ 2002, ದಿ.06.07.2002
6. ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಪರಿಷ್ಕೃತ ಆದೇಶ ಸಂಖ್ಯೆ 11014/21/2006–ಬಿಸಿ–1, ದಿನಾಂಕ 11.08.2011
7. ದಿನಾಂಕ:12.07.2013ರಂದು ಮಂಡಿಸಿದ 2013–14ನೇ ಸಾಲಿನ ಪರಿಷ್ಕೃತ ಆಯವ್ಯಯ ಭಾಷಣದಲ್ಲಿನ ಘೋಷಣೆ ಕಂಡಿಕೆ ಸಂಖ್ಯೆ:271
8. ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಪ್ರಸ್ತಾವನೆ ಸಂಖ್ಯೆ: ಹಿಂವಕಇ/ಪಿಎಂಎಸ್–ಡಿಬಿಟಿ/ಸಿಆರ್–10/2013–14, ದಿನಾಂಕ 15.08.2013

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಿಂದ (5)ರಲ್ಲಿನ ಆದೇಶಗಳಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ **"ಹೆಚ್ಚುವರಿ ಭೋಜನಾ ವೆಚ್ಚ"** ಮಂಜೂರು ಮಾಡಲು ಆದೇಶ/ಮಾರ್ಗಸೂಚಿಗಳನ್ನು ನೀಡಲಾಗಿತ್ತು. ಸದರಿ ಸರ್ಕಾರದ ಆದೇಶಗಳಂತೆ ಮಂಜೂರು ಮಾಡಲಾಗುತ್ತಿದ್ದ ದರಗಳು ಬಹಳ ಕಡಿಮೆ ಇದ್ದು, ಮಂಜೂರಾತಿ ಷರತ್ತುಗಳೂ ಸಹ ಈಗಿನ ಸನ್ನಿವೇಶದಲ್ಲಿ ಪ್ರಸ್ತುತ ಇಲ್ಲದಿರುವ ಕಾರಣ, ಈ ಆದೇಶಗಳನ್ನು ನಿರಸನಗೊಳಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿನ ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಕಾರ್ಯಕ್ರಮದಲ್ಲಿ, ನಿಗದಿಪಡಿಸಿರುವ ಷರತ್ತುಗಳನ್ನು ಅಳವಡಿಸಿಕೊಂಡು, ಹೊಸದಾಗಿ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ 2013–14ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ **"ಊಟ ಮತ್ತು ವಸತಿ ಸಹಾಯ ಯೋಜನೆ",** ಕಾರ್ಯಕ್ರಮವನ್ನು ಜಾರಿಗೊಳಿಸಲು ಮಂಜೂರಾತಿ ನೀಡಬೇಕೆಂದು ಕೋರಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ(8)ರ ಏಕ ಕಡತದ ಮುಖೇನ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಿದರೂ ಸಹ, ವಿದ್ಯಾರ್ಥಿನಿಲಯಗಳಿಗೆ ಅಗತ್ಯವಿರುವಷ್ಟು ಸ್ಥಳಾವಕಾಶ, ಶೌಚಾಲಯಗಳು ಹಾಗೂ ಸ್ನಾನ ಗೃಹಗಳು ಇರುವ ಖಾಸಗಿ ಕಟ್ಟಡಗಳು ಲಭ್ಯವಾಗುತ್ತಿಲ್ಲ. ಸಾರ್ವಜನಿಕರು ಖಾಸಗಿ ಕಟ್ಟಡವನ್ನು ವಿದ್ಯಾರ್ಥಿನಿಲಯಗಳಿಗಾಗಿ ಬಾಡಿಗೆಗೆ ನೀಡಲು ಮುಂದೆ ಬರುತ್ತಿಲ್ಲ ಹಾಗೂ ಕೆಲವು ಕಡೆ ಬಾಡಿಗೆಗೆ ಕಟ್ಟಡಗಳು ಲಭ್ಯವಾದರೂ ಸಹ, ಅವುಗಳಲ್ಲಿನ ಕೊಠಡಿಗಳ ಅಳತೆ ತೀರಾ ಕಡಿಮೆ ಇರುವುದರಿಂದ ಒಂದು ಚಿಕ್ಕ ಕೊಠಡಿಯಲ್ಲಿ 5 ರಿಂದ 8 ಮಂದಿ ವಿದ್ಯಾರ್ಥಿಗಳಿಗೆ ಅವಕಾಶ ನೀಡಿದ್ದು, ತೀರಾ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಇವರು ವಾಸವಿರುವ ಪರಿಸ್ಥಿತಿ ನಿರ್ಮಾಣವಾಗಿದೆ. ಇದರಿಂದ ಅವರ ವಿದ್ಯಾಭ್ಯಾಸಕ್ಕೆ ಹಾಗೂ ಅವರ ಒಟ್ಟಾರೆ ಆರೋಗ್ಯಕ್ಕೆ ತೊಂದರೆಯಾಗುತ್ತಿದೆ.

ಈ ಹಿನ್ನಲೆಯಲ್ಲಿ ಹಾಗೂ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಪ್ರವೇಶಕ್ಕಾಗಿ ಅತೀ ಹೆಚ್ಚಿನ ಬೇಡಿಕೆ ಇರುವುದರಿಂದ, ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ದೊರಕದ ಹಾಗೂ ಮೆರಿಟ್ ಹೊಂದಿರುವ ವಿದ್ಯಾರ್ಥಿಗಳಿಗೆ, ಪ್ರತಿ ವಿದ್ಯಾರ್ಥಿಗೆ ಪ್ರತಿ ತಿಂಗಳಿಗೆ 1,500/– ರೂ.ನಂತೆ ಶೈಕ್ಷಣಿಕ ಅವಧಿಯ 10 ತಿಂಗಳಿಗೆ ಒಟ್ಟು 15,000 ರೂ.ಗಳನ್ನು ಅವರ ಬ್ಯಾಂಕ್ ಖಾತೆಗಳಿಗೆ ಆನ್‌ಲೈನ್ ಮುಖಾಂತರ ಜಮಾ ಮಾಡುವ **"ಊಟ ಮತ್ತು ವಸತಿ ಸಹಾಯ ಯೋಜನೆ"** ಯನ್ನು ಜಾರಿಗೆ ತರಲು ಸರ್ಕಾರ ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಬಿಸಿಡಬ್ಲ್ಯೂ 516 ಬಿಎಂಎಸ್ 2013, ಬೆಂಗಳೂರು ದಿನಾಂಕ:24.09.2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಮೇಲೆ ಓದಲಾದ ಕ್ರಮ ಸಂಖ್ಯೆ(1) ರಿಂದ (5)ರವರೆಗಿನ ಸರ್ಕಾರದ ಆದೇಶಗಳನ್ನು ನಿರಸನಗೊಳಿಸಿ(ssupersession), ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗಾಗಿ ಅನುಷ್ಠಾನಗೊಳಿಸುತ್ತಿರುವ ರಾಜ್ಯದ ಹೆಚ್ಚುವರಿ ಭೋಜನಾ ವೆಚ್ಚ ಕಾರ್ಯಕ್ರಮಕ್ಕೆ ಬದಲಾಗಿ, ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಕಾರ್ಯಕ್ರಮದಲ್ಲಿ ನಿಗದಿಪಡಿಸಿರುವ ಷರತ್ತುಗಳನ್ನು ಅಳವಡಿಸಿಕೊಂಡು, ಹೊಸದಾಗಿ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ, ಈ ಆದೇಶದ **ಅನುಬಂಧ**ದಲ್ಲಿರುವ ಮಾರ್ಗಸೂಚಿಗಳ ಪ್ರಕಾರ **"ಊಟ ಮತ್ತು ವಸತಿ ಸಹಾಯ ಯೋಜನೆ",** ಕಾರ್ಯಕ್ರಮವನ್ನು ಜಾರಿಗೊಳಿಸಲು ಆದೇಶಿಸಿದೆ.

ಈ ಯೋಜನೆಯಡಿ ಸೌಲಭ್ಯವನ್ನು, ಆಯಾ ಆರ್ಥಿಕ ವರ್ಷದಲ್ಲಿ ಲಭ್ಯವಿರುವ ಅನುದಾನದ ಮಿತಿಗೆ ಒಳಪಟ್ಟು, ಮಂಜೂರು ಮಾಡತಕ್ಕದ್ದು. ಈ ಯೋಜನೆಗೆ ತಗಲುವ ವೆಚ್ಚವನ್ನು, ರಾಜ್ಯವಲಯ ಯೋಜನೆ ಲೆಕ್ಕಶೀರ್ಷಿಕೆ 2225–03–800–0–31ರಡಿ ಒದಗಿಸುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಪಿಡಿ 44 ಐಎಂಎಂ2013, ದಿ.28.08.2013ರಲ್ಲಿ ನೀಡಿರುವ ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 604 ವೆಚ್ಚ–3/13, ದಿ.31.08.2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ

**ಬಿ.ಹೆಚ್.ಅನಿಲ್ ಕುಮಾರ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 516 ಬಿಎಂಎಸ್ 2013, ದಿನಾಂಕ 24.09.2013 ಕ್ಕೆ ಅನುಬಂಧ**

**ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ "ಊಟ ಮತ್ತು ವಸತಿ ಸಹಾಯ ಯೋಜನೆ" ಕಾರ್ಯಕ್ರಮ ಅನುಷ್ಠಾನದ ಮಾರ್ಗಸೂಚಿಗಳು.**

(ಸಮಾಜ ಕಲ್ಯಾಣ /ಪರಿಶಿಷ್ಟ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗಳ ವ್ಯಾಪ್ತಿಗೆ ಬರುವ ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಸೌಲಭ್ಯಗಳನ್ನು ಪಡೆಯಲು ಅರ್ಹರಿರುವುದಿಲ್ಲ.)

**I. ಯೋಜನೆಯ ಉದ್ದೇಶ:**

(ಅ) ಯಾವುದೇ ಇಲಾಖೆಯ ಸರ್ಕಾರಿ / ಸರ್ಕಾರಿ ಅನುದಾನಿತ ವಿದ್ಯಾರ್ಥಿನಿಲಯ / ವಸತಿ ಕಾಲೇಜುಗಳಲ್ಲಿ, ಪ್ರವೇಶ ದೊರೆಯದ ಹಾಗೂ ಮೆಟ್ರಿಕ್–ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ, ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ, **ಊಟ ಮತ್ತು ವಸತಿ ಸಹಾಯ**ವನ್ನು ಒದಗಿಸುವುದು, ಈ ಯೋಜನೆಯ ಉದ್ದೇಶ.

(ಆ) ಈ ಯೋಜನೆಯಡಿ ಆಯ್ಕೆಯಾದ ವಿದ್ಯಾರ್ಥಿಗಳಿಗೆ, ಪ್ರತಿ ತಿಂಗಳಿಗೆ ರೂ.1500/–ರಂತೆ, ಶೈಕ್ಷಣಿಕ ಅವಧಿಯ 10 ತಿಂಗಳಿಗೆ ಒಟ್ಟು ರೂ.15,000/– ಸಹಾಯಧನವನ್ನು, ಇತರೆ ನಿಬಂಧನೆಗಳಿಗೊಳಪಟ್ಟು, ಅವರು ಯಾವುದಾದರೂ ಕೋರ್ ಬ್ಯಾಂಕಿಂಗ್ ವ್ಯವಸ್ಥೆ ಇರುವ ಬ್ಯಾಂಕಿನಲ್ಲಿ ತೆರೆದಿರುವ ಬ್ಯಾಂಕ್ ಖಾತೆಗೆ, ಆನ್‌ಲೈನ್ ಮೂಲಕ ಜಮಾ ಮಾಡುವುದು.

(ಇ) **ವಿದ್ಯಾರ್ಥಿಗಳು (i)ವಿದ್ಯಾರ್ಥಿ ನಿಲಯದಲ್ಲಿ ಪ್ರವೇಶ, (ii) ಊಟ ಮತ್ತು ವಸತಿ ಸಹಾಯ ಯೋಜನೆ ಮತ್ತು (iii) ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ –** ಇವುಗಳಲ್ಲಿ ಯಾವುದಾದರೂ ಒಂದು ಸೌಲಭ್ಯಕ್ಕೆ ಮಾತ್ರ ಅರ್ಹರಿರುತ್ತಾರೆ.

**(ಈ)** ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾದವರು, ಆನ್‌ಲೈನ್ (Online) ಮೂಲಕ ಅರ್ಜಿ ಸಲ್ಲಿಸಬೇಕು.

**II. ಅರ್ಹತೆ:**

1. (ಅ) ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿ ಆಗಿರಬೇಕು.

(ಆ) ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ, ಇತರೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿರಬೇಕು.

(ಇ) ಕರ್ನಾಟಕದ ಶಾಸನಬದ್ದ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ, ಸರ್ಕಾರಿ / ಸ್ಥಳೀಯ ಸಂಸ್ಥೆ/ ಅನುದಾನಿತ ಸಂಸ್ಥೆಗಳು / ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ – ಮೆಟ್ರಿಕ್ ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಾಗಿರಬೇಕು.

2. (ಅ) ಈ ಮೇಲಿನ ಸೌಲಭ್ಯ ಪಡೆಯಲು ವಿದ್ಯಾರ್ಥಿಯ, ತಂದೆ–ತಾಯಿ/ಪೋಷಕರ ಕುಟುಂಬದ, ಒಟ್ಟು ವಾರ್ಷಿಕ ವರಮಾನ (Gross Annual Income) ಈ ಕೆಳಗೆ ನಿಗದಿಪಡಿಸಿದ ಮಿತಿಯೊಳಗೆ ಇರಬೇಕು.

(i) ಪ್ರವರ್ಗ–1 ರ ವಿದ್ಯಾರ್ಥಿಗಳಿಗೆ ರೂ.2.50 ಲಕ್ಷ

(ii) ಪ್ರವರ್ಗ–2ಎ, 3ಎ ಮತ್ತು 3ಬಿ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ

(ಆ) ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶದವಾಗಿರಬೇಕು ಹಾಗೂ ವ್ಯಾಸಂಗ ಮಾಡುವ ಕಾಲೇಜಿನಿಂದ ಕನಿಷ್ಠ 5 ಕಿ.ಮೀ. ದೂರದವರಾಗಿರಬೇಕು. ಆದರೆ, ವಿದ್ಯಾರ್ಥಿಯ ಸ್ವಂತ ಸ್ಥಳ,ನಗರ/ಪಟ್ಟಣ ಆಗಿದ್ದು, ಅವರು ಬೇರೆ ನಗರ/ಪಟ್ಟಣದಲ್ಲಿ ಇರುವ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಈ ಸೌಲಭ್ಯಕ್ಕೆ ಅರ್ಹರಿರುತ್ತಾರೆ.

(ಇ) ಈ ಯೋಜನೆಯಡಿ ಪ್ರಥಮ ಬಾರಿಗೆ ಸೌಲಭ್ಯವನ್ನು ಪಡೆಯಲು, ಈ ಹಿಂದಿನ ವರ್ಷದ ವಾರ್ಷಿಕ ಪರೀಕ್ಷೆಯಲ್ಲಿ, ಈ ಕೆಳಗಿನಂತೆ ಕನಿಷ್ಠ ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು.

ಪ್ರವರ್ಗ–1 – 40%

ಪ್ರವರ್ಗ–2ಎ, 3ಎ, 3ಬಿ – 50%

(ಈ) ನವೀಕರಣ ವಿದ್ಯಾರ್ಥಿಗಳು ಈ ಯೋಜನೆ ಸೌಲಭ್ಯಕ್ಕೆ ಅರ್ಹರಾಗಲು, ಅವರು ಈ ಹಿಂದಿನ ವರ್ಷದ ವಾರ್ಷಿಕ ಪರೀಕ್ಷೆಯಲ್ಲಿ, ಈ ಕೆಳಗಿನಂತೆ ಕನಿಷ್ಠ ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು.

ಪ್ರವರ್ಗ–1 – 50%

ಪ್ರವರ್ಗ–2ಎ, 3ಎ, 3ಬಿ – 60%

(ಒಂದು ವೇಳೆ, ವೈದ್ಯಕೀಯ ಕಾರಣಗಳಿಂದಾಗಿ ಪರೀಕ್ಷೆಗೆ ಹಾಜರಾಗಲು ಸಾಧ್ಯವಾಗದಿದ್ದಲ್ಲಿ, ಅಂತಹವರು, ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು.)

3. (ಅ) ಸಮಾನ ಕೋರ್ಸುಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಅರ್ಹರಿರುವುದಿಲ್ಲ. (ಉದಾ: ಬಿ.ಎ ನಂತರ ಬಿ.ಕಾಂ, ಎಂ.ಎ (ಕನ್ನಡ) ನಂತರ ಎಂ.ಎ (ಇಂಗ್ಲೀಷ್), ಬಿ.ಎಡ್ ನಂತರ ಎಲ್.ಎಲ್.ಬಿ, ಇತ್ಯಾದಿಗಳಿಗೆ ಪ್ರವೇಶ ಪಡೆದಿದ್ದಲ್ಲಿ)

(ಆ) ಸ್ನಾತಕೋತ್ತರ ವೈದ್ಯಕೀಯ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು, ಕೋರ್ಸಿನ ಅವಧಿಯಲ್ಲಿ ಮೆಡಿಕಲ್ ಪ್ರಾಕ್ಟೀಸ್ ಮಾಡುತ್ತಿದ್ದಲ್ಲಿ, ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.

(ಇ) ಕಲೆ, ವಿಜ್ಞಾನ, ಹಾಗೂ ವಾಣಿಜ್ಯ ಕೋರ್ಸುಗಳ, ಪದವಿ ಅಥವಾ ಸ್ನಾತಕೋತ್ತರ ಪದವಿಗಳಲ್ಲಿ ಉತ್ತೀರ್ಣ / ಅನುತ್ತೀರ್ಣರಾದವರು ಅಂಗೀಕೃತ ವೃತ್ತಿಪರ ಅಥವಾ ತಾಂತ್ರಿಕ ಸರ್ಟಿಫಿಕೇಟ್, ಡಿಪ್ಲೋಮ, ಪದವಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ, ಹಾಗೂ ಇತರೆ ರೀತಿ ಅರ್ಹರಿದ್ದಲ್ಲಿ ಅವರು ಈ ಯೋಜನೆಯ ಅಡಿ ಸೌಲಭ್ಯಗಳಿಗೆ ಅರ್ಹರಿರುತ್ತಾರೆ. ಒಂದಕ್ಕಿಂತ ಹೆಚ್ಚು ಬಾರಿ ಕೋರ್ಸುಗಳ ಬದಲಾವಣೆ ಮಾಡಿಕೊಂಡವರು ಅರ್ಹರಿರುವುದಿಲ್ಲ.

(ಈ) ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಆದರೆ, ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.

4. 2014–15ನೇ ಸಾಲಿನಿಂದ, ಈ ಸೌಲಭ್ಯವನ್ನು ಪಡೆಯಲು ಇಚ್ಛಿಸುವ ವಿದ್ಯಾರ್ಥಿಗಳು, ಕಡ್ಡಾಯವಾಗಿ ಅವರ ಹೆಸರಿನಲ್ಲಿ **ಆಧಾರ್ ಸಂಖ್ಯೆಯನ್ನು** ಹೊಂದಿರತಕ್ಕದ್ದು.

**III. ಅರ್ಜಿ ಸಲ್ಲಿಸುವ ವಿಧಾನ:**

(ಅ) ಈ ಯೋಜನೆಯಡಿ ಸಹಾಯಧನ ಪಡೆಯಲು ಇಚ್ಛಿಸುವ ಹಾಗೂ ಅರ್ಹತೆಯುಳ್ಳ ವಿದ್ಯಾರ್ಥಿಗಳು, ನಿಗದಿತ **ಅರ್ಜಿ ನಮೂನೆಯಲ್ಲಿ, ಆನ್‌ಲೈನ್** ಮೂಲಕ ಎಲ್ಲಾ ವಿವರಗಳನ್ನು ನಮೂದಿಸಿ, ಅರ್ಜಿ ಸಲ್ಲಿಸಬೇಕು.

(ಆ) ಅರ್ಜಿಯೊಂದಿಗೆ ಲಗತ್ತಿಸಬೇಕಾದ ಎಲ್ಲಾ ಮೂಲ ದಾಖಲೆಗಳನ್ನು ಸ್ಕ್ಯಾನ್(Scan) ಮಾಡಿ, ಅಪ್‌ಲೋಡ್(Upload)ಮಾಡಬೇಕು.

(ಇ) ಯಾವುದಾದರೂ ಕೋರ್ ಬ್ಯಾಂಕಿಂಗ್ ವ್ಯವಸ್ಥೆ ಇರುವ ಬ್ಯಾಂಕಿನಲ್ಲಿ, ವಿದ್ಯಾರ್ಥಿಯ ಹೆಸರಿನಲ್ಲಿ (ಎಸ್.ಎಸ್.ಎಲ್.ಸಿ ಅಂಕಪಟ್ಟಿಯಲ್ಲಿ ದಾಖಲಾಗಿರುವ ರೀತಿಯಲ್ಲಿ), ಉಳಿತಾಯ ಖಾತೆಯನ್ನು ತೆರೆದು, ವಿವರಗಳನ್ನು ಅರ್ಜಿಯಲ್ಲಿ ನಮೂದಿಸಬೇಕು.

**IV. ಅನುದಾನ ಹಂಚಿಕೆ ವಿಧಾನ:**

(ಅ) ಆಯಾ ಶೈಕ್ಷಣಿಕ ವರ್ಷದಲ್ಲಿ ಲಭ್ಯವಾಗುವ ಅನುದಾನವನ್ನು ಪ್ರವರ್ಗವಾರು ಈ ಕೆಳಗಿನ ಮೀಸಲಾತಿಯಂತೆ ಮರು ಹಂಚಿಕೆ ಮಾಡಬೇಕು.

**ಪ್ರವರ್ಗವಾರು ಹಂಚಿಕೆ** ಮಾಡಬೇಕಾಗಿರುವ ಮೊತ್ತದ ಶೇಕಡಾವಾರು

| | | |
|---|---|---|
| ಪ್ರವರ್ಗ–1 | – | 15 % |
| ಪ್ರವರ್ಗ–2ಎ | – | 53 % |
| ಪ್ರವರ್ಗ–3ಎ | – | 14 % |
| ಪ್ರವರ್ಗ–3ಬಿ | – | 18 % |
| **ಒಟ್ಟು** | – | **100** % |

(ಆ) ಆ ಆರ್ಥಿಕ ವರ್ಷಕ್ಕೆ ಲಭ್ಯವಾಗುವ ಅನುದಾನದ ಮಿತಿಗೆ ಒಳಪಟ್ಟು, ಅರ್ಹತೆ ಮತ್ತು ಆದಾಯಕ್ಕೆ (Merit cum Means) ಅನುಗುಣವಾಗಿ ಮಂಜೂರು ಮಾಡಬೇಕು.

**V. ಕಾಲೇಜು ಪ್ರಾಂಶುಪಾಲರು ಮತ್ತು ಇಲಾಖೆಯ "ಪರಿಶೀಲನಾ ಅಧಿಕಾರಿ" ಕೈಗೊಳ್ಳಬೇಕಾದ ಕ್ರಮಗಳು:**

(ಅ) ಆ ಕಾಲೇಜಿನ ವಿದ್ಯಾರ್ಥಿಗಳು ಆನ್‌ಲೈನ್ ಮೂಲಕ ಸಲ್ಲಿಸುವ ಅರ್ಜಿಗಳ ಸ್ವೀಕೃತಿ ಪತ್ರ ಮತ್ತು ಅಪ್‌ಲೋಡ್ ಮಾಡಿರುವ ಎಲ್ಲಾ ದಾಖಲೆಗಳ, ಧೃಢೀಕೃತ ಪ್ರತಿಗಳನ್ನು ವಿದ್ಯಾರ್ಥಿಗಳಿಂದ ಪಡೆದುಕೊಳ್ಳಬೇಕು. ಸದರಿ ಮಾಹಿತಿಯನ್ನು ಅವರು ಸಲ್ಲಿಸಿರುವ ದಾಖಲೆಗಳನ್ನು, ಕಾಲೇಜಿನಲ್ಲಿ ಲಭ್ಯವಿರುವ ಮಾಹಿತಿಗಳೊಂದಿಗೆ ಪರಿಶೀಲಿಸಿ ಆನ್‌ಲೈನ್‌ನಲ್ಲಿ ಧೃಡೀಕರಿಸಬೇಕು. ಈ ರೀತಿ ಧೃಢೀಕರಿಸಲ್ಪಟ್ಟ ಪಟ್ಟಿಯ ಹಾರ್ಡ್‌ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು, ಪ್ರತಿ ವಿದ್ಯಾರ್ಥಿವಾರು ಅಗತ್ಯ ದಾಖಲಾತಿಗಳನ್ನು, ಅನುಕ್ರಮವಾಗಿ ಜೋಡಿಸಿ ಸಿದ್ದಪಡಿಸಿಟ್ಟುಕೊಳ್ಳಬೇಕು.

(ಆ) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ, ಅಧಿಕೃತ **"ಪರಿಶೀಲನಾ ಅಧಿಕಾರಿ"** ಕಾಲೇಜಿನ ಪ್ರಾಂಶುಪಾಲರು ಈ ಮೇಲಿನಂತೆ ಸಿದ್ದಪಡಿಸಿದ ಧೃಢೀಕೃತ ಪಟ್ಟಿಯಲ್ಲಿ ನಮೂದಾಗಿರುವ ಎಲ್ಲ ವಿದ್ಯಾರ್ಥಿಗಳ ದಾಖಲಾತಿಗಳು ಸರಿ ಇರುವ ಬಗ್ಗೆ ಹಾಗೂ ಈ ಸೌಲಭ್ಯಕ್ಕೆ ಅವರು ಅರ್ಹರಿರುವ ಬಗ್ಗೆ **ಆನ್‌ಲೈನ್‌ನಲ್ಲಿ** ಧೃಢೀಕರಿಸಬೇಕು. ಸದರಿ ದಾಖಲಾತಿಗಳನ್ನು ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿಗೆ ಸಲ್ಲಿಸಬೇಕು.

(ಇ) ಈ ರೀತಿ ಸಲ್ಲಿಸಿದ ಮಾಹಿತಿ ಆಧಾರದ ಮೇಲೆ ತಾಲ್ಲೂಕು ಮಟ್ಟದ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ, ಪರಿಶೀಲನೆ ಮಾಡಿ ಅರ್ಹ ವಿದ್ಯಾರ್ಥಿಗಳಿಗೆ **"ಊಟ ಮತ್ತು ವಸತಿ ಸಹಾಯ"** ವನ್ನು ಮಂಜೂರು ಮಾಡಬೇಕು.

(ಈ) ಈ ಮೇಲಿನಂತೆ ಮಂಜೂರು ಮಾಡಿದ, ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ, ಪ್ರಾಂಶುಪಾಲರು ಪ್ರತಿ ತಿಂಗಳ ಹಾಜರಾತಿಯನ್ನು, ಅವರ ಹೆಸರು ಮತ್ತು ತರಗತಿಯ ವಿವರಗಳನ್ನು ನಮೂದಿಸಿ ದೃಢೀಕರಿಸಿ, ನಂತರದ ತಿಂಗಳ ಮೊದಲನೇ ವಾರದಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವೆಬ್‌ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಬೇಕು.

(ಉ) ವಿದ್ಯಾರ್ಥಿಗೆ ನೀಡುವ ಸೌಲಭ್ಯಗಳು, ಅವರ ಶೈಕ್ಷಣಿಕ ಪ್ರಗತಿ ಮತ್ತು ಉತ್ತಮ ನಡತೆಗೆ ಒಳಪಟ್ಟಿರುತ್ತದೆ. ಆದ ಕಾರಣ, ಶೈಕ್ಷಣಿಕ ಪ್ರಗತಿಯು ತೃಪ್ತಿಕರವಾಗಿಲ್ಲದಿದ್ದಲ್ಲಿ, ಅಧಿಕೃತವಾಗಿ ಅನುಮತಿಯನ್ನು ಪಡೆಯದೇ ಪದೇ ಪದೇ ತರಗತಿಗಳಿಗೆ ಗೈರು ಹಾಜರಾದಲ್ಲಿ, ಅಥವಾ ಮುಷ್ಕರಗಳಲ್ಲಿ ಭಾಗವಹಿಸಿದ್ದಲ್ಲಿ ಅಥವಾ ಇನ್ಯಾವುದೇ ಕಾನೂನು ಬಾಹಿರ ಚಟುವಟಿಕೆಗಳಲ್ಲಿ ತೊಡಗಿದ್ದಲ್ಲಿ, ಈ ಸೌಲಭ್ಯಗಳನ್ನು ತಕ್ಷಣದಿಂದಲೇ ಹಿಂದಕ್ಕೆ ಪಡೆಯಲಾಗುವುದು. ಆದ ಕಾರಣ ಈ ರೀತಿ ವರ್ತಿಸುವ ವಿದ್ಯಾರ್ಥಿಗಳ ಬಗ್ಗೆ ವೆಬ್‌ಪೋರ್ಟಲ್‌ನಲ್ಲಿ ಷರಾ ನಮೂದಿಸಬೇಕು.

**VI. ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳು ಅನುದಾನವನ್ನು ಮರು ಹಂಚಿಕೆ ಮಾಡಲು ಅನುಸರಿಸಬೇಕಾದ ಕಾರ್ಯವಿಧಾನ:**

(ಅ) ಆಯಾ ಜಿಲ್ಲೆಗೆ ಆಯಾ ಆರ್ಥಿಕ ವರ್ಷದಲ್ಲಿ ಲಭ್ಯವಿರುವ ಅನುದಾನವನ್ನು ಹಿಂದುಳಿದ ವರ್ಗಗಳ ಪ್ರವರ್ಗಗಳ ವಿದ್ಯಾರ್ಥಿಗಳಿಗೆ ಅರ್ಹತೆ ಮತ್ತು ಆದಾಯಕ್ಕೆ (Merit cum Means) ಅನುಗುಣವಾಗಿ, ವಿದ್ಯಾರ್ಥಿಗಳ ಮೆರಿಟ್ ಪಟ್ಟಿಯನ್ನು ತಯಾರಿಸಬೇಕು ಮತ್ತು ಈ ಮೆರಿಟ್ ಪಟ್ಟಿಯಂತೆ, ತಾಲ್ಲೂಕುವಾರು, ಅನುದಾನವನ್ನು ಹಂಚಿಕೆ ಮಾಡಬೇಕು.

(ಆ) ಜಿಲ್ಲಾ ಪಂಚಾಯತಿಯಿಂದ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ನೇರವಾಗಿ ಅನುದಾನವನ್ನು ಮೇಲಿನಂತೆ ಮರು ಹಂಚಿಕೆ ಮಾಡಿ ಬಿಡುಗಡೆ ಮಾಡಬೇಕು.

(ಇ) ಸದರಿ ಮೆರಿಟ್ ಪಟ್ಟಿಯ ಹಾರ್ಡ್ ಪ್ರತಿಯನ್ನು ಸಂಬಂಧಪಟ್ಟ ತಾಲ್ಲೂಕು ಅಧಿಕಾರಿಗಳಿಗೆ ಒದಗಿಸುವುದು.

(ಈ) ವಿವಿಧ ಕೋರ್ಸುಗಳು, ಶೈಕ್ಷಣಿಕ ವರ್ಷದ ವಿವಿಧ ತಿಂಗಳುಗಳಲ್ಲಿ ಪ್ರಾರಂಭವಾಗುವ ಕಾರಣ, ವಿಳಂಬವಾಗಿ ಪ್ರಾರಂಭವಾಗುವ ಕೋರ್ಸುಗಳಿಗೆ ಅರ್ಜಿ ಸಲ್ಲಿಸಲು ಪ್ರತ್ಯೇಕ ಕೊನೆಯ ದಿನಾಂಕವನ್ನು ನಿಗದಿಪಡಿಸತಕ್ಕದ್ದು. ಇಂತಹ ಕೋರ್ಸುಗಳಿಗೆ ಪ್ರತ್ಯೇಕವಾಗಿ ಪ್ರವರ್ಗವಾರು ಮೆರಿಟ್ ಪಟ್ಟಿಯನ್ನು ತಯಾರಿಸಬೇಕು ಹಾಗೂ ಇದಕ್ಕಾಗಿ ಅಗತ್ಯವಿರುವಷ್ಟು ಅನುದಾನವನ್ನು ಕಾಯ್ದಿರಿಸಿಕೊಳ್ಳಬೇಕು.

**VII. ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ವಿದ್ಯಾರ್ಥಿ ವೇತನ ಮಂಜೂರು ಮಾಡುವ ಕಾರ್ಯವಿಧಾನ:**

1. (ಅ) ಒಂದು ತಿಂಗಳ ಸಹಾಯಧನವನ್ನು ಆ ವಿದ್ಯಾರ್ಥಿಯ ಖಾತೆಗೆ ಜಮಾ ಮಾಡಬೇಕಾಗಿದ್ದಲ್ಲಿ, ಆ ವಿದ್ಯಾರ್ಥಿಯ ಹಿಂದಿನ ತಿಂಗಳ, ಕಾಲೇಜಿನ ಹಾಜರಾತಿ ಕನಿಷ್ಠ ಶೇ.75 ರಷ್ಟು ಇರಬೇಕು. ಆದರೆ, ಈ ನಿರ್ಬಂಧ ಶೈಕ್ಷಣಿಕ ವರ್ಷದ ಮಧ್ಯದಲ್ಲಿ ಬರುವ ಸಾರ್ವತ್ರಿಕ ರಜಾ ದಿನಗಳಿಗೆ ಅನ್ವಯವಾಗುವುದಿಲ್ಲ.

(ಆ) ನವೀಕರಣ ಹಾಗೂ ಹೊಸ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ, ಶೈಕ್ಷಣಿಕ ವರ್ಷದಲ್ಲಿ ತರಗತಿಗಳು ಪ್ರಾರಂಭವಾದ ತಿಂಗಳಿಂದ ನಂತರದ 10 ತಿಂಗಳ ಅವಧಿಗೆ ಅಥವಾ ಕೋರ್ಸು ಮುಕ್ತಾಯವಾಗುವ ತಿಂಗಳವರೆಗೆ, ಇವುಗಳಲ್ಲಿ ಯಾವುದು ಕಡಿಮೆಯೋ ಆ ಅವಧಿಗೆ, ಈ ಸೌಲಭ್ಯವನ್ನು ಮಂಜೂರು ಮಾಡಬೇಕು. **ಆದರೆ, ವಿದ್ಯಾರ್ಥಿಯು, ಕೋರ್ಸಿನ ಪ್ರಾರಂಭದ ಹಾಗೂ ಅಂತಿಮ ತಿಂಗಳುಗಳಲ್ಲಿ, ಕನಿಷ್ಠ 15 ದಿನಗಳ ಹಾಜರಾತಿ ಹೊಂದಿರಬೇಕು.**

2. (ಅ) ಪ್ರಾಂಶುಪಾಲರು ವೆಬ್‌ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಿರುವ ವಿದ್ಯಾರ್ಥಿಗಳ ತಿಂಗಳ ಹಾಜರಾತಿಯನ್ವಯ, ಶೇಕಡ 75 ರಷ್ಟು ಹಾಜರಾತಿ ಇರುವ ತಿಂಗಳುಗಳಿಗೆ, ರೂ.1500/– ರಂತೆ, ಊಟ ಮತ್ತು ವಸತಿ ಸಹಾಯದ ಮೊತ್ತವನ್ನು ಮಂಜೂರು ಮಾಡಬೇಕು.

(ಆ) **ಪ್ರತಿ ಮಾಹೆವಾರು,** ಮಂಜೂರಾತಿ ಆದೇಶ ಮತ್ತು ಬ್ಯಾಂಕುವಾರು ಬಿಲ್ಲುಗಳನ್ನು ಇಲಾಖೆಯ ವೆಬ್‌ಪೋರ್ಟಲ್‌ನಿಂದ ಡೌನ್‌ಲೋಡ್ ಮಾಡಿಕೊಂಡು, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಮೇಲು ರುಜು ಪಡೆದುಕೊಳ್ಳಬೇಕು.

(ಇ) ಸದರಿ ಬಿಲ್ಲನ್ನು, ಬ್ಯಾಂಕುವಾರು ವಿದ್ಯಾರ್ಥಿಗಳ ಬ್ಯಾಂಕ್ ಅಕೌಂಟ್ ಮತ್ತು ಐ.ಎಫ್.ಎಸ್.ಸಿ ಕೋಡ್ ನೊಂದಿಗೆ ಖಜಾನೆಗೆ (ಸಾಫ್ಟ್ ಪ್ರತಿಯೊಂದಿಗೆ) ಸಲ್ಲಿಸಿ,ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ನೇರವಾಗಿ **ಆನ್‌ಲೈನ್ ಮೂಲಕ** ಜಮಾ ಮಾಡಲು ಕ್ರಮ ತೆಗೆದುಕೊಳ್ಳಬೇಕು.

3. ಕೋರ್ಸಿನ ಅವಧಿ ಎರಡು ಆರ್ಥಿಕ ವರ್ಷಗಳಿಗೆ ವಿಸ್ತರಣೆಯಾದಲ್ಲಿ, ಆಯಾ ಆರ್ಥಿಕ ವರ್ಷಕ್ಕೆ ಹಂಚಿಕೆಯಾದ ಅನುದಾನದಿಂದ, ಮೇಲಿನ ನಿಬಂಧನೆಗಳಿಗೆ ಒಳಪಟ್ಟು, ಈ ಸೌಲಭ್ಯವನ್ನು ಮಂಜೂರು ಮಾಡಬೇಕು.

4. ಸೆಮಿಸ್ಟರ್ ಪದ್ದತಿ ಇರುವ ಕೋರ್ಸುಗಳಿಗೆ ಸಂಬಂಧಪಟ್ಟಂತೆ, ಆ ಶೈಕ್ಷಣಿಕ ವರ್ಷದಲ್ಲಿ ಬರುವ ಸೆಮಿಸ್ಟರುಗಳು ಎಂದರ್ಥ.

**VIII. ತಪ್ಪು ಮಾಹಿತಿಗೆ ದಂಡ:**

1. ಅರ್ಜಿದಾರರು ಅಥವಾ ಶಿಕ್ಷಣ ಸಂಸ್ಥೆಯು, ತಪ್ಪು ಮಾಹಿತಿ ನೀಡಿದ್ದಲ್ಲಿ, ಅಂತಹವರ ವಿರುದ್ದ ನಿಯಮಾನುಸಾರ ಈ ಕೆಳಗಿನಂತೆ ಕ್ರಮ ತೆಗೆದುಕೊಳ್ಳಲಾಗುವುದು.
2. ಭಾರತೀಯ ದಂಡ ಸಂಹಿತೆಯ ಕಲಂ 177 ಮತ್ತು 181ರ ಪ್ರಕಾರ, ಶಿಕ್ಷೆಗೆ ಗುರಿಪಡಿಸಲಾಗುತ್ತದೆ.
3. ಕಾನೂನಿನಂತೆ ಕ್ರಮ ಜರುಗಿಸುವುದರ ಜೊತೆಗೆ, ವಿದ್ಯಾರ್ಥಿಯು ಪಡೆದ ಒಟ್ಟು ಆರ್ಥಿಕ ಸಹಾಯವನ್ನು ಆ ವಿದ್ಯಾರ್ಥಿಯಿಂದ ಅಥವಾ ಅವರ ತಂದೆ–ತಾಯಿ / ಪೋಷಕರಿಂದ, ಭೂ ಕಂದಾಯ ಬಾಕಿಯೆಂದು ವಸೂಲಿ ಮಾಡಲಾಗುವುದು.
4. ಮಂಜೂರು ಮಾಡುವ ಅಧಿಕಾರಿಗಳು ಸಹ, ನಿಯಮಗಳ ವಿರುದ್ದ ಮಂಜೂರು ಮಾಡಿ, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿದಲ್ಲಿ, ಅಂತಹವರ ವಿರುದ್ದ ಶಿಸ್ತಿನ ಕ್ರಮ ಜರುಗಿಸುವುದಲ್ಲದೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗುವುದು ಹಾಗೂ ಈ ರೀತಿ ತಪ್ಪಾಗಿ ಪಾವತಿಯಾದ ಮೊತ್ತವನ್ನು ಅವರ ವೇತನದಿಂದ ವಸೂಲಿ ಮಾಡಲಾಗುವುದು.

**IX. ಇತರೆ:**

1. ಪ್ರವರ್ಗವಾರು ಜಾತಿಗಳ ಪಟ್ಟಿ, ಕುಟುಂಬದ ವಾರ್ಷಿಕ ವರಮಾನ, ಅರ್ಹತೆ, ಇತ್ಯಾದಿ, ಸರ್ಕಾರವು ಕಾಲ ಕಾಲಕ್ಕೆ ಹೊರಡಿಸುವ ಆದೇಶಗಳನ್ವಯ ಪರಿಷ್ಕರಣೆಗೆ ಒಳಪಟ್ಟಿರುತ್ತದೆ.
2. ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಅರ್ಜಿ ನಮೂನೆ, ಕಾರ್ಯವಿಧಾನ ಇತ್ಯಾದಿಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತರು ನಿರ್ಧರಿಸುವುದು.

**ಬಿ.ಹೆಚ್.ಅನಿಲ್ ಕುಮಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**PR.1075**
**SC.10,000**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : 2013–14ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಲಾದ ಗ್ರಾಮ ಅರಣ್ಯ ಸಮಿತಿಗಳ ಪುನ:ಶ್ಚೇತನ ಎಂಬ ಹೊಸ ಯೋಜನೆ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ** : ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಪಿಸಿಸಿಎಫ್ (ಹೆಚ್‌ಒಎಫ್‌ಎಫ್) ಸಿಆರ್–66/ಡಿ–1/ಬಿಯುಡಿ/ 2013–14, ದಿನಾಂಕ 29–07–2013.

**ಪ್ರಸ್ತಾವನೆ:**

ಸನ್ಮಾನ್ಯ ಮುಖ್ಯ ಮಂತ್ರಿಯವರು 2013–14ನೇ ಸಾಲಿನ ಆಯವ್ಯಯದಲ್ಲಿ ಅರಣ್ಯ ಇಲಾಖೆಯ ಅರಣ್ಯಾಭಿವೃದ್ಧಿ ಕೆಲಸಗಳು, ಅರಣ್ಯಗಳ ಸಂರಕ್ಷಣೆ/ನಿರ್ವಹಣೆ ಮಾಡುವ ನಿಟ್ಟಿನಲ್ಲಿ ಪ್ರಮುಖವಾಗಿರುವ ಗ್ರಾಮ ಅರಣ್ಯ ಸಮಿತಿಗಳಿಗೆ ಅನುದಾನ ನಿಗಧಿಯಾಗದಿರುವ ಕಾರಣದಿಂದ ನಿಷ್ಕ್ರಿಯವಾಗುವುದನ್ನು ತಪ್ಪಿಸಿ ಇವುಗಳನ್ನು ಪುನ:ಶ್ಚೇತನಗೊಳಿಸಲು **"ಗ್ರಾಮ ಅರಣ್ಯ ಸಮಿತಿಗಳ ಪುನ:ಶ್ಚೇತನ"** ಎಂಬ ಹೊಸ ಯೋಜನೆಯನ್ನು ಘೋಷಿಸಿರುತ್ತಾರೆ. ಇದರನುಸಾರ 2013–14ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 2406–01–102–2–19–59(ಯೋಜನೆ)ಯನ್ನು ಸೃಜಿಸಿ ಇದರಡಿ ರೂ.700.00 ಲಕ್ಷಗಳ ಅನುದಾನ ನಿಗಧಿಪಡಿಸಲಾಗಿದೆ.

ಮೇಲೆ ಓದಲಾದ ದಿನಾಂಕ:29–07–2013ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ರವರು 2013–14ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಆಗಿರುವಂತೆ **"ಗ್ರಾಮ ಅರಣ್ಯ ಸಮಿತಿಗಳ ಪುನ:ಶ್ಚೇತನ"** ಎಂಬ ಹೊಸ ಕಾರ್ಯಕ್ರಮವನ್ನು 2013–14ನೇ

ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2406–01–102–2–19–59 (ಯೋಜನೆ)ರಡಿ ಒದಗಿಸಿರುವ ರೂ.700.00 ಲಕ್ಷಗಳಲ್ಲಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಿ, ಪ್ರಸಕ್ತ ಸಾಲಿಗೆ ಲಭ್ಯವಿರುವ ರೂ.700.00 ಲಕ್ಷಗಳ ಅನುದಾನವನ್ನು ವಿನಿಯೋಗಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 121 ಎಫ್‌ಎಪಿ 2013, ಬೆಂಗಳೂರು, ದಿನಾಂಕ: 25–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರಾಜ್ಯ ಸರ್ಕಾರವು 2013–14ನೇ ಸಾಲಿನಿಂದ ಜಾರಿಗೆ ಬರುವಂತೆ ರಾಜ್ಯದಲ್ಲಿ **"ಗ್ರಾಮ ಅರಣ್ಯ ಸಮಿತಿಗಳ ಪುನಃಶ್ಚೇತನ"** ಎಂಬ ಹೊಸ ಯೋಜನೆಯನ್ನು ಜಾರಿಗೆ ತರಲು ಅನುಮೋದನೆ ನೀಡಿದೆ

2013–14ನೇ ಸಾಲಿನಲ್ಲಿ ಗ್ರಾಮ ಅರಣ್ಯ ಸಮಿತಿಗಳ ಪುನಃಶ್ಚೇತನ ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ ನಿಗಧಿಪಡಿಸಿದ ರೂ.700.00 ಲಕ್ಷಗಳಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳತಕ್ಕದ್ದು.

| ಕ್ರ ಸಂ | ಉದ್ದೇಶಿತ ಕಾಮಗಾರಿಗಳು | ಘಟಕ | ದರ (ರೂಗಳಲ್ಲಿ) | ಭೌತಿಕ ಗುರಿ | ಆರ್ಥಿಕ ಗುರಿ (ರೂ ಲಕ್ಷದಲ್ಲಿ) |
|---|---|---|---|---|---|
| 1 | ಗ್ರಾಮ ಅರಣ್ಯ ಸಮಿತಿಗಳ ಪುನಃಶ್ಚೇತನಕ್ಕಾಗಿ ಬೀಜಧನ ನೀಡುವುದು (Seed money) | ಸಂಖ್ಯೆ | 10000/1 | 150 | 15.000 |
| 2 | ಸಮಗ್ರ ನಿರ್ವಹಣಾ ಯೋಜನೆಯ ತಯಾರಿಕೆ (Integrated Management Plan) | ಸಂಖ್ಯೆ | 15000/1 | 150 | 22.500 |
| 3 | ಗ್ರಾಮ ಅರಣ್ಯ ಸಮಿತಿಗಳಿಗೆ ಸುತ್ತು ನಿಧಿ | ಸಂಖ್ಯೆ | 100000/1 | 150 | 150.000 |
| 4 | ಕೃಷಿ ಅರಣ್ಯ ಬೆಳೆಸುವಿಕೆಗಾಗಿ ಸಸಿಗಳ ವಿತರಣೆ (8"x 12") 5000ಸಂ/ಗ್ರಾಅಸ | ಸಂಖ್ಯೆ | 11670/1000 | 7.50 | 87.530 |
| 5 | ತರಬೇತಿ | ಸಂಖ್ಯೆ | 93170/1 | 150 | 139.756 |
| 6 | ಕೌಶಲ್ಯಾಭಿವೃದ್ಧಿ ತರಬೇತಿ (Skill Upgradation Training) 10ಸಂ/ಗ್ರಾಅಸ | ಸಂಖ್ಯೆ | 2000 | 1500 | 30.000 |
| 7 | ಗೋಬರ್‌ಗ್ಯಾಸ್ ಸ್ಥಾವರ / ಇತರೆ ಪ್ರಾಕೃತಿಕ ಇಂಧನ ಮೂಲಗಳ ಉಳಿತಾಯದ ಸಾಧನಗಳು (Other energy / forest saving devices when not feasible) | ಸಂಖ್ಯೆ | 25000/1 | 150 | 37.500 |
| 8 | ಸರಳ ಒಲೆ ನಿರ್ಮಾಣ (50ಸಂ/ಗ್ರಾಅಸ) | ಸಂಖ್ಯೆ | 810/1 | 7500 | 60.750 |
| 9 | ಎಲ್‌ಪಿಜಿ (ದ್ರವೀಕೃತ ಇಂಧನ ಅನಿಲ) ಸಂಪರ್ಕ 20 ಫಲಾನುಭವಿಗಳು/ಗ್ರಾಅಸ | ಸಂಖ್ಯೆ | 2000 | 3000 | 60.000 |
| 10 | **ಸುಗಮಗಾರಿಕೆಗಾಗಿ** (Facilitation) | | | | |
| | ಅ) ಸುಗಮಗಾರರ ವೆಚ್ಚ | ಸಂಖ್ಯೆ | 14300/1*12 | 08 | 13.730 |
| | ಆ) ಸಂಯೋಜಕರ ವೆಚ್ಚ | ಸಂಖ್ಯೆ | 24750/1*12 | 01 | 2.970 |
| 11 | ನೆಡುತೋಪು ಬೆಳೆಸಲು ಮುಂಗಡ ಕಾಮಗಾರಿಗಳು | ಹೆಕ್ಟೇರ್ | 34475/Ha | 180 | 62.055 |
| 12 | ಮಣ್ಣು ಮತ್ತು ಜಲ ಸಂರಕ್ಷಣಾ ಚಟುವಟಿಕೆಗಳು | ಹೆಕ್ಟೇರ್ | 9400/Ha | 180 | 16.920 |
| 13 | Miscellaneous including capacity building, Exposure visits of VFC members and Unforeseen Expenditure | | | | 1.289 |
| | **ಒಟ್ಟು** | | | | **700.00** |

ಈ ಯೋಜನೆಗೆ ತಗಲುವ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ 2406–01–102–2–19–59 (ಯೋಜನೆ)ರಡಿ ಭರಿಸತಕ್ಕದ್ದು.

ಕರ್ನಾಟಕ ಸರ್ಕಾರವು ಕ್ಷೀಣಿತ ಅರಣ್ಯ ಪ್ರದೇಶಗಳ ರಕ್ಷಣೆ, ಅಭಿವೃದ್ಧಿ ಮತ್ತು ನಿರ್ವಹಣೆಯಲ್ಲಿ ಸ್ಥಳೀಯರನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳುವ ದಿಸೆಯಲ್ಲಿ **"ಪಾಲಿಸಿದರೆ ಪಾಲು"** ತತ್ವದ **"ಜಂಟಿ ಅರಣ್ಯ ಯೋಜನೆ ಮತ್ತು ನಿರ್ವಹಣೆ"** ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹೊರಡಿಸಲಾಗಿರುವ ಸರ್ಕಾರಿ ಆದೇಶ ಸಂಖ್ಯೆ: ಅಪಜೀ 50 ಎಫ್‌ಎಪಿ 2000 ದಿನಾಂಕ: 19.06.2002ರಲ್ಲಿ ನೀಡಿರುವ ಮಾರ್ಗಸೂಚಿಗಳನ್ನು ಪಾಲಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 18 ಪಿಎಫ್‌ಒ 2013 ದಿನಾಂಕ: 13.08.2013 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 904 ವೆಚ್ಚ–5/2013 ದಿನಾಂಕ: 27.08.2013ರಲ್ಲಿ ಪಡೆದ ಸಹಮತಿನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

PR.1066

SC.150

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : 2013–14ನೇ ಸಾಲಿನಿಂದ ಆಯವ್ಯಯದಲ್ಲಿ ಘೋಷಿಸಿರುವಂತೆ "ಹೊಸದಾಗಿ ಘೋಷಿತವಾದ ಅಭಯಾರಣ್ಯ ಮತ್ತು ವನ್ಯಜೀವಿ ಸಂರಕ್ಷಣಾ ತಾಣಗಳ ಅಭಿವೃದ್ಧಿ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ** : ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು), ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಪಿಸಿಸಿಎಫ್ (ಹೆಚ್ಓಎಫ್ಎಫ್) ಸಿಆರ್–62/ಡಿ–1/ಬಿಯುಡಿ/ 2013–14, ದಿನಾಂಕ: 01–08–2013.

**ಪ್ರಸ್ತಾವನೆ:**

ಸನ್ಮಾನ್ಯ ಮುಖ್ಯ ಮಂತ್ರಿಯವರು 2013–14ನೇ ಸಾಲಿನ ಆಯವ್ಯಯದಲ್ಲಿ ಅಳಿವಿನಂಚಿನಲ್ಲಿರುವ ವನ್ಯಜೀವಿ ಸಂಕುಲವನ್ನು ರಕ್ಷಿಸಲು ಹೊಸ ವನ್ಯಜೀವಿ ಧಾಮಗಳನ್ನು ಸ್ಥಾಪಿಸಿ ಆಯಾ ವನ್ಯಜೀವಿ ಸಂಕುಲಗಳ ಸಂರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡುವ ಸಲುವಾಗಿ **"ಹೊಸದಾಗಿ ಘೋಷಿತವಾದ ಅಭಯಾರಣ್ಯ ಮತ್ತು ವನ್ಯಜೀವಿ ಸಂರಕ್ಷಣಾ ತಾಣಗಳ ಅಭಿವೃದ್ಧಿ"** ಎಂಬ ಹೊಸ ಯೋಜನೆಯನ್ನು ಘೋಷಿಸಿರುತ್ತಾರೆ. ಇದರನುಸಾರ 2013–14ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ 2406–02–110–0–50–059 (ಯೋಜನೆ) ಎಂಬ ಹೊಸ ಲೆಕ್ಕ ಶೀರ್ಷಿಕೆಯನ್ನು ಸೃಜಿಸಿ ಇದರಡಿ ರೂ.700.00 ಲಕ್ಷಗಳ ಅನುದಾನವನ್ನು ನಿಗಧಿಪಡಿಸಲಾಗಿದೆ.

ಮೇಲೆ ಓದಲಾದ ದಿನಾಂಕ:01–08–2013ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ರವರು 2013–14ನೇ ಸಾಲಿನಿಂದ ಜಾರಿಗೆ ಬರುವಂತೆ **"ಹೊಸದಾಗಿ ಘೋಷಿತವಾದ ಅಭಯಾರಣ್ಯ ಮತ್ತು ವನ್ಯಜೀವಿ ಸಂರಕ್ಷಣಾ ತಾಣಗಳ ಅಭಿವೃದ್ಧಿ"** ಎಂಬ ಹೊಸ ಯೋಜನಗೆ ಅನುಮೋದನೆ ನೀಡಿ, ಸದರಿ ಯೋಜನೆಗೆ ಆಯವ್ಯಯ ಲೆಕ್ಕ ಶೀರ್ಷಿಕೆ 2406–02–110–0–50–059 (ಯೋಜನೆ)ರಡಿ ಅವಕಾಶ ಕಲ್ಪಿಸಿರುವ ರೂ.700.00 ಲಕ್ಷಗಳನ್ನು ಪ್ರಸಕ್ತ ಸಾಲಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 122 ಎಫ್‌ಎಪಿ 2013, ಬೆಂಗಳೂರು, ದಿನಾಂಕ: 25–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರಾಜ್ಯ ಸರ್ಕಾರವು 2013–14ನೇ ಸಾಲಿನಿಂದ ರಾಜ್ಯದಲ್ಲಿ **"ಹೊಸದಾಗಿ ಘೋಷಿತವಾದ ಅಭಯಾರಣ್ಯ ಮತ್ತು ವನ್ಯಜೀವಿ ಸಂರಕ್ಷಣಾ ತಾಣಗಳ ಅಭಿವೃದ್ಧಿ"** ಎಂಬ ಹೊಸ ಯೋಜನೆಯನ್ನು ಜಾರಿಗೆ ತರಲು ಅನುಮೋದನೆ ನೀಡಿದೆ.

2013–14ನೇ ಸಾಲಿನಲ್ಲಿ**"ಹೊಸದಾಗಿ ಘೋಷಿತವಾದ ಅಭಯಾರಣ್ಯ ಮತ್ತು ವನ್ಯಜೀವಿ ಸಂರಕ್ಷಣಾ ತಾಣಗಳ ಅಭಿವೃದ್ಧಿ"** ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ ನಿಗಧಿಪಡಿಸಿದ ರೂ.700.00 ಲಕ್ಷಗಳಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳತಕ್ಕದ್ದು.

**ಅನಾವರ್ತಕ ಚಟುವಟಿಕೆಗಳುಃ (Non-Recurrent activities)**

ಎ) ರಸ್ತೆಗಳ ಸಂಪರ್ಕದ ಉನ್ನತೀಕರಣ ಹಾಗೂ ಹೊಸ ರಸ್ತೆಗಳ ನಿರ್ಮಾಣ, ರಸ್ತೆಗಳ ಗಸ್ತು ತಿರುಗುವಿಕೆ, ಹಾದಿಯ ಸುಗಮ ಸಂಚಾರ, ಕಲ್ವರ್ಟ್ಸ್ ರಚನೆ, ಸೇತುವೆಗಳ ನಿರ್ಮಾಣ, ಗಸ್ತು ತಿರುಗುವಿಕೆಗಾಗಿ ಆನೆ ಮತ್ತು ವನ್ಯಜೀವಿ ಪರಿವೀಕ್ಷಣೆಯ ತಂಡಗಳ ರಚನೆ, ವೀಕ್ಷಣಾ ಗೋಪುರಗಳ ನಿರ್ಮಾಣ, ಕೇಂದ್ರಸ್ಥಾನದಲ್ಲಿ ಅಪರಾಧ ಕೋಶಗಳ ರಚನೆ ಹಾಗೂ ಇತರೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

ಬಿ) ವಿವಿಧ ಜಾತಿಯ ಮಣ್ಣು ಮತ್ತು ತೇವಾಂಶ ಹೊಂದಿರುವಂತಹ ಸಂರಕ್ಷಣಾ ಚಟುವಟಿಕೆಗಳಾದ ಗಲ್ಲಿ ಪ್ಲಗ್ಗಿಂಗ್, ಬಾಹ್ಯ ರೇಖೆಯ ಪ್ರದೇಶ ನಿಗದಿ ಮತ್ತು ಇತರೆ ಕೆಲಸಗಳ ಕೈಗೊಳ್ಳುವಿಕೆ. ಇವುಗಳೊಂದಿಗೆ ಇನ್ನಿತರ ಅವಶ್ಯಕ ಅಭಿವೃದ್ಧಿ ಚಟುವಟಿಕೆಗಳಾದ ನೀರಿನ ಕೊಯಿಲುವಿಕೆ, ನಾಲಾ ಬಂಡ್‌ಗಳನ್ನು ಉಳಿಸುವಿಕೆ, ಕೆರೆಗಳು, ಚೆಕ್ ಡ್ಯಾಂ, ಬಾವಿಗಳು, ಕೊಳ, ಝರಿ, ಹಾಗೂ ಇನ್ನಿತರ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳುವುದು.

ಸಿ) ಬೆಂಕಿ ರಕ್ಷಣಾ ಕಾರ್ಯಗಳಾದ, ಬೆಂಕಿ ರೇಖೆ ರಚನೆ ಮತ್ತು ಬೆಂಕಿ ತಡೆಗಟ್ಟುವಿಕೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಹಾಗೂ ಬೆಂಕಿ ನಂದಿಸಲು ಅವಶ್ಯಕವಾದ ಸಲಕರಣೆಗಳ ಖರೀದಿ.

ಡಿ) ಸಸ್ಯ ಮತ್ತು ಪ್ರಾಣಿ ಸಂಕುಲದ ರಕ್ಷಣೆಗಾಗಿ ಅನಾವಶ್ಯಕವಾಗಿ ಬೆಳೆದ ಇತರೆ ಸಸ್ಯಗಳ ನಿರ್ಮೂಲನ ಕ್ರಮ ಹಮ್ಮಿಕೊಳ್ಳುವುದು, ರಕ್ಷಣಾ ರೇಖೆಗೆ ಅಡ್ಡವಿರುವ ಸಸ್ಯಗಳ ನಿರ್ಮೂಲನೆ

ಇ) ಸೋಲಾರ್ ತಂತಿಬೇಲಿ ಮತ್ತು ಆನೆ ತಡೆಕಂದಕಗಳ ನಿರ್ಮಾಣ

ಎಫ್) ಕಛೇರಿ ಕಟ್ಟಡ ಮತ್ತು ಇಲಾಖಾ ಸಿಬ್ಬಂದಿ ವಸತಿಗೃಹ ನಿರ್ಮಾಣ

ಆ. **ಆವರ್ತಕ ಚಟುವಟಿಕೆಗಳು: (Recurrent activities)**

ಎ) ಬೆಂಕಿಯ ಕಾಲದಲ್ಲಿ, ಪ್ರಸ್ತುತದಲ್ಲಿರುವ ಬೆಂಕಿಯ ರೇಖೆಯ ನಿರ್ವಹಣೆಯಲ್ಲದೇ ಹೊಸದಾಗಿ ರಚಿಸಿರುವ ಬೆಂಕಿ ರೇಖೆಗಳಿಗೆ ಹೆಚ್ಚುವರಿಯಾಗಿ ವಾಹನಗಳನ್ನು ಉಪಯೋಗಿಸಿಕೊಳ್ಳುವುದಲ್ಲದೇ, ಬೆಂಕಿಯ ನಿರ್ವಹಣೆಗಾಗಿ ವಾಚರುಗಳನ್ನು ನೇಮಿಸಿಕೊಂಡು ಬೆಂಕಿಯ ರಕ್ಷಣಾ ಕಾರ್ಯವನ್ನು ನಿರ್ವಹಿಸುವುದು.

ಬಿ) ರಕ್ಷಿತ ಪ್ರದೇಶಗಳಲ್ಲಿನ ನೀರಿನ ಹೊಂಡಗಳನ್ನು ಆಗಾಗ್ಗೆ ಆಳ ತೆಗೆದು ನೀರು ನಿಲ್ಲಲು ಕ್ರಮ ಕೈಗೊಳ್ಳುವುದಲ್ಲದೆ, ಇದರ ನಿರ್ವಹಣೆ ಕಾರ್ಯವನ್ನು ಕೈಗೊಳ್ಳುವುದು.

ಸಿ) ರಕ್ಷಿತ ಪ್ರದೇಶಗಳ ಅಂಚಿನಲ್ಲಿನ ಗಿರಿಜನರ ಸಹಕಾರ ಮತ್ತು ಅರಣ್ಯ ರಕ್ಷಣಾ ಸಮಿತಿ ಸದಸ್ಯರನ್ನು ಒಗ್ಗೂಡಿಸಿಕೊಂಡು ಕಳ್ಳಬೇಟೆ ತಡೆ ಶಿಬಿರಗಳನ್ನು ನಿರ್ವಹಿಸುವುದು.

ಡಿ) ಕಾಡಂಚಿನ ಗ್ರಾಮಗಳಲ್ಲಿ ಕಾಡಾನೆ ದಾಳಿಯನ್ನು ತಡೆಯಲು ಆನೆ ಹಿಮ್ಮೆಟ್ಟಿಸುವ ಶಿಬಿರಗಳನ್ನು ರಚಿಸುವುದು. (ಸದರಿ ಶಿಬಿರಗಳಿಗೆ ಪಟಾಕಿ, ಟಾರ್ಚ್, ಶಬ್ಧ ಸಲಕರಣೆಗಳು ಮತ್ತು ಸೀಮೆಎಣ್ಣೆ ಇನ್ನಿತರ ಅವಶ್ಯಕ ಉಪಕರಣಗಳನ್ನು ಪೂರೈಸುವುದು).

ಇ) ಅರಣ್ಯ ತಕ್ಷೀರು ಪ್ರಕರಣಗಳಿಗೆ ಮಾಹಿತಿ ನೀಡಿದಂತಹ ವ್ಯಕ್ತಿಗಳಿಗೆ ಬಹುಮಾನ ರೂಪದಲ್ಲಿ ಉತ್ತೇಜಿಸಲು ಅನುದಾನ ಕಲ್ಪಿಸುವುದು.

ಎಫ್) ಸೋಲಾರ್ ತಂತಿ ಬೇಲಿ, ಆನೆತಡೆ ಕಂದಕಗಳ ಮತ್ತು ರಸ್ತೆಗಳ ನಿರ್ವಹಣೆ.

ಜಿ) ರಕ್ಷಣಾ ಕಾರ್ಯಕ್ಕಾಗಿ ದಿನಗೂಲಿ ನೌಕರರನ್ನು ನೇಮಿಸಿಕೊಂಡು ಸಿಬ್ಬಂದಿಯ ಸಂಖ್ಯೆಯನ್ನು ಬಲಪಡಿಸುವುದು.

ಹೆಚ್) ಆನೆ ಸಂರಕ್ಷಣೆಗಾಗಿ ಪ್ರಚಾರ ಮತ್ತು ತಿಳುವಳಿಕೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು. (ಆನೆದಿನ ಕಾರ್ಯಕ್ರಮ ಒಳಗೊಂಡಂತೆ)

ಐ) ರಾಜ್ಯದ ರಕ್ಷಣಾ ಸಿಬ್ಬಂದಿಯನ್ನು ಅಭಿವೃದ್ಧಿಪಡಿಸುವಿಕೆಗೆ ಸಹಕಾರ ನೀಡುವುದಲ್ಲದೆ, GIS, GPS ಉಪಕರಣಗಳನ್ನು ಉಪಯೋಗಿಸಲು ವಿಶೇಷ ತರಬೇತಿ ನೀಡುವುದು, ಕಳ್ಳ ಬೇಟೆ ನಿಗ್ರಹ ಕಾರ್ಯಕ್ರಮ ಹಮ್ಮಿಕೊಳ್ಳುವುದು, ವನ್ಯಜೀವಿ ಅಪರಾಧ ಪ್ರಕರಣಗಳನ್ನು ತಡೆಯುವುದು, ವನ್ಯಜೀವಿಗಳ ವಸಹಾತುಗಳನ್ನು ಹೆಚ್ಚಿಸಲು ತಾಂತ್ರಿಕ ಮನೋಬಾವನೆ ಬೆಳೆಸುವಿಕೆ ಹಾಗು ಪರಿಸರ ಅಭಿವೃದ್ಧಿ ಚಟುವಟಿಕೆಗಾಗಿ ಉತ್ತೇಜನ, ನ್ಯಾಯಾಲಯ ಪ್ರಕರಣ ಮತ್ತು ವನ್ಯಜೀವಿ ಪ್ರಕರಣಗಳಿಗೆ ನ್ಯಾಯ ಬಗ್ಗೆ ವ್ಯವಹರಿಸುವುದು.

ಇಲಾಖೆಯ ಈ ಕಾರ್ಯಕ್ರಮವನ್ನು ಮಹಾತ್ಮಾ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯೊಂದಿಗೆ ಸಮೀಕರಿಸಿ ಜಾರಿಗೆ ತರುವ ಬಗ್ಗೆ ಕಾರ್ಯಕ್ರಮ ರೂಪಿಸುವುದು.

ಇಲಾಖೆಯ ಈ ಕಾರ್ಯಕ್ರಮ ಜಾರಿಗೊಳಿಸಲು ದೀರ್ಘವಾಧಿ ನಿರ್ವಹಣಾ ಕಾರ್ಯಕ್ರಮಗಳ ರೀತಿಯಲ್ಲಿ ಕಾರ್ಯಕ್ರಮ ರೂಪಿಸಿ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

2013–14ನೇ ಸಾಲಿನಲ್ಲಿ **"ಹೊಸದಾಗಿ ಘೋಷಿತವಾದ ಅಭಯಾರಣ್ಯ ಮತ್ತು ವನ್ಯಜೀವಿ ಸಂರಕ್ಷಣಾ ತಾಣಗಳ ಅಭಿವೃದ್ಧಿ"** ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ ನಿಗಧಿಪಡಿಸಿದ ರೂ.700.00 ಲಕ್ಷಗಳನ್ನು ಪ್ರಸಕ್ತ ಸಾಲಿನಲ್ಲಿ ಪ್ರದೇಶವಾರು ವಿನಿಯೋಗಿಸುವ ಬಗ್ಗೆ ಪ್ರತ್ಯೇಕ ಪ್ರಸ್ತಾವನೆ ಸಲ್ಲಿಸಿ ಕ್ರಿಯಾ ಯೋಜನೆಗೆ ಸರ್ಕಾರದಿಂದ ಅನುಮೋದನೆ ಪಡೆಯುವುದು.

ಈ ಯೋಜನೆಗೆ ತಗಲುವ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ 2406–02–110–0–50–059 (ಯೋಜನೆ)ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 21 ಪಿಎಫ್ಒ 2013 ದಿನಾಂಕ: 16.08.2013 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 905 ವೆಚ್ಚ–5/2013 ದಿನಾಂಕ: 27.08.2013 ರಲ್ಲಿ ಪಡೆದ ಸಹಮತಿನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR.1067**

**SC.150**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : 2013–14ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಲಾದ **"ಹುಲಿ ಮೀಸಲು ಪ್ರದೇಶ, ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯಗಳಲ್ಲಿ ವಾಸಿಸುತ್ತಿರುವ ಕುಟುಂಬಗಳ ಪುನರ್ವಸತಿ"** ಎಂಬ ಹೊಸ ಯೋಜನೆ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ** : ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,(ಅರಣ್ಯಪಡೆ ಮುಖ್ಯಸ್ಥರು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಪಿಸಿಸಿಎಫ್ (ಹೆಚ್ಒಎಫ್ಎಫ್) ಸಿಆರ್–63/ಡಿ–1/ಬಿಯುಡಿ/ 2013–14, ದಿನಾಂಕ 01–08–2013.

**ಪ್ರಸ್ತಾವನೆ:**

ಸನ್ಮಾನ್ಯ ಮುಖ್ಯ ಮಂತ್ರಿಯವರು 2013–14ನೇ ಸಾಲಿನ ಆಯವ್ಯಯದಲ್ಲಿ ಹುಲಿ ಮೀಸಲು ಪ್ರದೇಶ, ರಾಷ್ಟ್ರೀಯ ಉದ್ಯಾನವನ ಮತ್ತು ಅಭಯಾರಣ್ಯಗಳಲ್ಲಿ ವಾಸಿಸುತ್ತಿರುವ ಕುಟುಂಬಗಳು ಸ್ವ–ಇಚ್ಛೆಯ ಮೇರೆಗೆ ರಕ್ಷಿತ ಪ್ರದೇಶದ (ಹುಲಿ ಮೀಸಲು ಪ್ರದೇಶ, ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯಗಳು) ಹೊರಗಡೆ ಸ್ಥಳಾಂತರಿಸಲು ಪುನರ್ವಸತಿ ಪ್ಯಾಕೇಜ್‌ನ್ನು ಒದಗಿಸುವ ಸಲುವಾಗಿ **"ಹುಲಿ ಮೀಸಲು ಪ್ರದೇಶ, ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯಗಳಲ್ಲಿ ವಾಸಿಸುತ್ತಿರುವ ಕುಟುಂಬಗಳ ಪುನರ್ವಸತಿ"** ಎಂಬ ಹೊಸ ಯೋಜನೆಯನ್ನು ಘೋಷಿಸಿರುತ್ತಾರೆ. ಇದರನುಸಾರ 2013–14ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ **2406–01–800–0–14–(ಯೋಜನೆ)** ಎಂಬ ಹೊಸ ಲೆಕ್ಕ ಶೀರ್ಷಿಕೆಯನ್ನು ಸೃಜಿಸಿ ಇದರಡಿ ಒಟ್ಟು ರೂ.3500.00 ಲಕ್ಷಗಳ ಅನುದಾನ ನಿಗಧಿಪಡಿಸಲಾಗಿದೆ.

ಮೇಲೆ ಓದಲಾದ ದಿನಾಂಕ: 01–08–2013ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ರವರು 2013–14ನೇ ಸಾಲಿನ ಆಯವ್ಯಯದಲ್ಲಿ **2406–01–800–0–14–(ಯೋಜನೆ)** ಲೆಕ್ಕ ಶೀರ್ಷಿಕೆಯ ಉಪ ಲೆಕ್ಕ ಶೀರ್ಷಿಕೆ **059(ಯೋಜನೆ)** ಇದರಡಿಯಲ್ಲಿ ಒದಗಿಸಿರುವ ರೂ. 1900.00 ಲಕ್ಷ, **422–Special Component Plan (SCP) ರಡಿ ರೂ.1100.00 ಲಕ್ಷ ಹಾಗೂ 423–Tribal Sub-Plan (TSP) ರಡಿ** ಒದಗಿಸಿರುವ ರೂ.500.00 ಲಕ್ಷ ಹೀಗೆ ಒಟ್ಟು ರೂ.3500.00 ಲಕ್ಷಗಳ ಅನುದಾನದ ಮಿತಿಯಲ್ಲಿ **"ಹುಲಿ ಮೀಸಲು ಪ್ರದೇಶ, ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯಗಳಲ್ಲಿ ವಾಸಿಸುತ್ತಿರುವ ಕುಟುಂಬಗಳ ಪುನರ್ವಸತಿ"** ಎಂಬ ಹೊಸ ಯೋಜನೆಗೆ ಅನುಮೋದನೆ ನೀಡಿ, ಪ್ರಸಕ್ತ ಸಾಲಿಗೆ ಲಭ್ಯವಿರುವ ರೂ.3500.00 ಲಕ್ಷ ಅನುದಾನವನ್ನು ವಿನಿಯೋಗಿಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 123 ಎಫ್ಎಪಿ 2013, ಬೆಂಗಳೂರು, ದಿನಾಂಕ: 25–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರಾಜ್ಯ ಸರ್ಕಾರವು 2013–14ನೇ ಸಾಲಿನಿಂದ ಜಾರಿಗೆ ಬರುವಂತೆ ರಾಜ್ಯದಲ್ಲಿ **"ಹುಲಿ ಮೀಸಲು ಪ್ರದೇಶ, ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯಗಳಲ್ಲಿ ವಾಸಿಸುತ್ತಿರುವ ಕುಟುಂಬಗಳ ಪುನರ್ವಸತಿ"** ಎಂಬ ಹೊಸ ಯೋಜನೆಯನ್ನು ಜಾರಿಗೆ ತರಲು ಅನುಮೋದನೆ ನೀಡಿದೆ

ಹುಲಿ ಮೀಸಲು ಪ್ರದೇಶ ಹಾಗೂ ರಾಷ್ಟ್ರೀಯ ಉದ್ಯಾನವನಗಳಿಂದ ಸ್ವ–ಇಚ್ಛೆಯಿಂದ ಪುನರ್ವಸತಿಗೊಳ್ಳಲಿರುವ ಕುಟುಂಬಗಳಿಗೆ ಮುಂದಿನ 5 ವರ್ಷಗಳಲ್ಲಿ ಈ ಕೆಳಗಿನಂತೆ ಪರಿಹಾರ ಕಲ್ಪಿಸಲು ಸರ್ಕಾರದ ಅನಮೋದನೆ ನೀಡಿದೆ.

| ಕ್ರಸಂ | ಹುಲಿ ಸಂರಕ್ಷಿತ ಪ್ರದೇಶದ ಹೆಸರು | ಕುಟುಂಬಗಳ ಸಂಖ್ಯೆ | ಬೇಕಾಗುವ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 1 | ನಾಗರಹೊಳೆ ಹುಲಿ ಸಂರಕ್ಷಿತ | 818 | 8180.00 |
| 2 | ಭದ್ರಾ ಹುಲಿ ಸಂರಕ್ಷಿತ | 87 | 401.40 |
| 3 | ದಾಂಡೇಲಿ–ಅಣಶಿ ಹುಲಿ ಸಂರಕ್ಷಿತ | 605 | 6050.00 |
| 4 | ಕುದುರೆಮುಖ ರಾಷ್ಟ್ರೀಯ ಉದ್ಯಾನವನ | 66 | 1507.00 |
| | ಒಟ್ಟು | 1576 | 16138.40 |

ವಿಶೇಷ ಘಟಕ ಯೋಜನೆಯನ್ವಯ ಕಾರ್ಯಕ್ರಮ ಜಾರಿಗಾಗಿ ಅನುದಾನದ ವಿವರ:–

| ಕ್ರ.ಸಂ | ಹುಲಿ ಸಂರಕ್ಷಿತ ಪ್ರದೇಶದ ಹೆಸರು | ಕುಟುಂಬಗಳ ಸಂಖ್ಯೆ | ಬೇಕಾಗುವ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 1 | ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ | 9 | 90.00 |
| 2 | ಕುದುರೆಮುಖ ರಾಷ್ಟ್ರೀಯ ಉದ್ಯಾನವನ | 23 | 920.00 |
| 3 | ದಾಂಡೇಲಿ–ಅಣಶಿ ಹುಲಿ ಸಂರಕ್ಷಿತ ಪ್ರದೇಶ | 24 | 240.00 |
| | | **ಒಟ್ಟು** | **1250.00** |

ಗಿರಿಜನ ಉಪಯೋಜನೆಯನ್ವಯ ಕಾರ್ಯಕ್ರಮ ಜಾರಿಗಾಗಿ ಅನುದಾನದ ವಿವರ:–

| ಕ್ರಸಂ | ಹುಲಿ ಸಂರಕ್ಷಿತ ಪ್ರದೇಶದ ಹೆಸರು | ಕುಟುಂಬಗಳ ಸಂಖ್ಯೆ | ಬೇಕಾಗುವ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 1 | ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ | 50 | 500.00 |

ಹುಲಿ ಮೀಸಲು ಪ್ರದೇಶದಿಂದ ಸ್ವ–ಇಚ್ಛೆಯಿಂದ ಪುನರ್ವಸತಿಗೊಳ್ಳುವ ಕುಟುಂಬಗಳಿಗೆ ರಾಷ್ಟ್ರೀಯ ಹುಲಿ ಸಂರಕ್ಷಣಾ ಪ್ರಾಧಿಕಾರದ ಮಾರ್ಗಸೂಚಿಗಳನ್ವಯ ಪುನರ್ವಸತಿ ಪ್ಯಾಕೇಜ್‌ನ್ನು ಒದಗಿಸುವುದು.

ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಪ್ರದೇಶದಿಂದ ಸ್ವ–ಇಚ್ಛೆಯಿಂದ ಪುನರ್ವಸತಿಗೊಳ್ಳುವ ಕುಟುಂಬಗಳಿಗೆ ಕಂದಾಯ ಆದೇಶ ಸಂಖ್ಯೆ: ಆರ್‌ಡಿ 26 ಆರ್‌ಇಹೆಚ್ 2003, ದಿನಾಂಕ: 18–04–2005ರ ಮಾರ್ಗಸೂಚಿಗಳನ್ವಯ ಪುನರ್ ವಸತಿ ಪ್ಯಾಕೇಜ್ ನ್ನು ಒದಗಿಸುವುದು.

2013–14ನೇ ಸಾಲಿನಲ್ಲಿ **““ಹುಲಿ ಮೀಸಲು ಪ್ರದೇಶ, ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯಗಳಲ್ಲಿ ವಾಸಿಸುತ್ತಿರುವ ಕುಟುಂಬಗಳ ಪುನರ್ವಸತಿ”** ಕಾರ್ಯಕ್ರಮಕ್ಕಾಗಿ ಲೆಕ್ಕಶೀರ್ಷಿಕೆ **2406–01–800–0–14–(ಯೋಜನೆ)**ಯ ಉಪ ಲೆಕ್ಕ ಶೀರ್ಷಿಕೆ **059(ಯೋಜನೆ)** ಇದರಡಿಯಲ್ಲಿ ಒದಗಿಸಿ – ರುವ ರೂ. 1900.00 ಲಕ್ಷ, **422–Special Component Plan (SCP) ರಡಿ ರೂ.1100.00 ಲಕ್ಷ ಹಾಗೂ 423–Tribal Sub-Plan (TSP) ರಡಿ** ಒದಗಿಸಿರುವ ರೂ.500.00 ಲಕ್ಷ ಹೀಗೆ ಒಟ್ಟು ರೂ.3500.00 ಲಕ್ಷಗಳನ್ನು ಪ್ರಸಕ್ತ ಸಾಲಿನಲ್ಲಿ ವಿನಿಯೋಗಿಸುವ ಬಗ್ಗೆ ಪ್ರತ್ಯೇಕ ಪ್ರಸ್ತಾವನೆ ಸಲ್ಲಿಸಿ ಕ್ರಿಯಾ ಯೋಜನೆಗೆ ಸರ್ಕಾರದಿಂದ ಅನುಮೋದನೆ ಪಡೆಯುವುದು.

ಈ ಯೋಜನೆಗೆ ತಗಲುವ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ **2406–01–800–0–14**(ಯೋಜನೆ) ಇದರ ಉಪ ಲೆಕ್ಕಶೀರ್ಷಿಕೆ **059–ಇತರೆ ವೆಚ್ಚಗಳು,** ಉಪ ಲೆಕ್ಕ ಶೀರ್ಷಿಕೆ **422– ವಿಶೇಷ ಘಟಕ ಯೋಜನೆ (SCP) ಹಾಗೂ ಉಪ ಲೆಕ್ಕ ಶೀರ್ಷಿಕೆ 423–** ಗಿರಿಜನ ಉಪ ಯೋಜನೆ **(TSP)** ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 19 ಪಿಎಫ್‌ಒ 2013 ದಿನಾಂಕ: 16.08.2013 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 906 ವೆಚ್ಚ–5/2013 ದಿನಾಂಕ: 27.08.2013ರಲ್ಲಿ ಪಡೆದ ಸಹಮತಿನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR.1068**
**SC.150**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : 2013–14ನೇ ಸಾಲಿನಿಂದ ಆಯವ್ಯಯದಲ್ಲಿ ಘೋಷಿಸಲಾದ “ಮಾನವ –ವನ್ಯಪ್ರಾಣಿ ಸಂಘರ್ಷಣೆ ತಡೆಯುವಿಕೆ” ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ** : ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಅರಣ್ಯಪಡೆ ಮುಖ್ಯಸ್ಥರು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಪಿಸಿಸಿಎಫ್ (ಹೆಚ್‌ಒಎಫ್‌ಎಫ್) ಸಿಆರ್–64/ಡಿ–1/ಬಿಯುಡಿ/2013–14, ದಿನಾಂಕ 01–08–2013.

**ಪ್ರಸ್ತಾವನೆ:**

ಸನ್ಮಾನ್ಯ ಮುಖ್ಯ ಮಂತ್ರಿಯವರು 2013–14ನೇ ಸಾಲಿನ ಆಯವ್ಯಯದಲ್ಲಿ ಜನಸಂಖ್ಯೆ ಹೆಚ್ಚಳದ ಪರಿಣಾಮವಾಗಿ ಅರಣ್ಯ ಪ್ರದೇಶಗಳನ್ನು ಆಹಾರ ಉತ್ಪಾದನೆಗಾಗಿ ಮತ್ತು ವಾಣಿಜ್ಯ ತೋಟದ ಬೆಳೆಗಳಿಗಾಗಿ ಬಳಸಿಕೊಳ್ಳುತ್ತಿರುವ ಕಾರಣ ಹಾಗೂ ಆನೆಕಟ್ಟುಗಳ ನಿರ್ಮಾಣದಿಂದ ಕೆಲವೊಂದು ಅರಣ್ಯಗಳು ಮುಳುಗಡೆಯಾಗಿ ಕಾಡಾನೆಗಳು ವಾಸಿಸುವ ನೈಸರ್ಗಿಕ ಆವಾಸಸ್ಥಾನದ ಪ್ರದೇಶವು ಕಡಿಮೆಯಾಗಿರುವುದರಿಂದ ಹಾಗೂ ಅರಣ್ಯ ಪ್ರದೇಶಗಳ ಅಂಚಿನಲ್ಲಿ ಇರುವ ಖಾಸಗಿ ಜಮೀನುಗಳಲ್ಲಿ ಬೆಳೆಯಲಾಗಿರುವ ಭತ್ತ, ತೆಂಗು, ಬಾಳೆ, ಹಲಸು ಮತ್ತು ಇನ್ನಿತರ ಬೆಳೆಗಳಿಗೆ ಅಕರ್ಷಣೆಗೊಂಡು ಕಾಡಾನೆ ಹಾಗೂ ಇತರ ಪ್ರಾಣಿಗಳು ದಾಳಿ ಮಾಡುತ್ತಿದ್ದು, ಈ ಮಾನವ–ವನ್ಯಜೀವಿ ಸಂಘರ್ಷಣೆ ಸಮಸ್ಯೆಯ ನಿರ್ವಹಣೆಗಾಗಿ ನಿರ್ಮಿಸಬೇಕಾಗಿರುವ ಸೌರಶಕ್ತಿ ಬೇಲಿ, ಅನೆತಡೆ ಕಂದಕ ಹಾಗೂ ಇನ್ನಿತರೆ ಅವಶ್ಯ ಕಾಮಗಾರಿಗಳ ಅನುಷ್ಠಾನಗೊಳಿಸುವ ಸಲುವಾಗಿ **"ಮಾನವ–ವನ್ಯಪ್ರಾಣಿ ಸಂಘರ್ಷಣೆ"** ಎಂಬ ಹೊಸ ಯೋಜನೆಯನ್ನು ಘೋಷಿಸಿರುತ್ತಾರೆ. ಇದರನುಸಾರ 2013–14ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 2406–01–800–0–15–59(ಯೋಜನೆ)ಯನ್ನು ಸೃಜಿಸಿ ಇದರಡಿ ರೂ.2100.00 ಲಕ್ಷಗಳ ಅನುದಾನ ನಿಗದಿಪಡಿಸಲಾಗಿದೆ.

ಮೇಲೆ ಓದಲಾದ ದಿನಾಂಕ:01–08–2013ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ರವರು 2013–14ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಆಗಿರುವಂತೆ **"ಮಾನವ–ವನ್ಯಪ್ರಾಣಿ ಸಂಘರ್ಷಣೆ"** ಎಂಬ ಹೊಸ ಕಾರ್ಯಕ್ರಮವನ್ನು 2013–14ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2406–01–800–0–15–59(ಯೋಜನೆ)ರಡಿ ಒದಗಿಸಿರುವ ರೂ.2100.00 ಲಕ್ಷಗಳಲ್ಲಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಿ, ಪ್ರಸಕ್ತ ಸಾಲಿಗೆ ಲಭ್ಯವಿರುವ ರೂ.2100.00 ಲಕ್ಷಗಳ ಅನುದಾನವನ್ನು ವಿನಿಯೋಗಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 124 ಎಫ್‌ಎಪಿ 2013, ಬೆಂಗಳೂರು, ದಿನಾಂಕ: 25–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರಾಜ್ಯ ಸರ್ಕಾರವು 2013–14ನೇ ಸಾಲಿನಿಂದ ಜಾರಿಗೆ ಬರುವಂತೆ ರಾಜ್ಯದಲ್ಲಿ **"ಮಾನವ–ವನ್ಯಪ್ರಾಣಿ ಸಂಘರ್ಷಣೆ ತಡೆಯುವಿಕೆ"** ಎಂಬ ಹೊಸ ಯೋಜನೆಯನ್ನು ಜಾರಿಗೆ ತರಲು ಅನುಮೋದನೆ ನೀಡಿದೆ.

**ಮಾನವ–ವನ್ಯಪ್ರಾಣಿ ಸಂಘರ್ಷಣೆ ತಡೆಯುವಿಕೆ ಕಾರ್ಯಕ್ರಮದ ರೂಪುರೇಷೆಗಳು/ಮಾರ್ಗಸೂಚಿಗಳು:–**

1. **ಆನೆಗಳ ಆವಾಸಸ್ಥಾನ ಅಭಿವೃದ್ಧಿ:**

ಆನೆಗಳ ಆವಾಸಸ್ಥಾನದಲ್ಲಿ ಆನೆಗಳಿಗೆ ಸಾಕಷ್ಟು ಮೇವು ಮತ್ತು ನೀರು ದೊರೆಯುವಂತೆ ಮಾಡುವುದು, ಕೆರೆಗಳ ಹೂಳೆತ್ತುವುದು ಮತ್ತು ಹೊಸ ಕೆರೆಗಳನ್ನು ನಿರ್ಮಿಸುವುದು, ಬೆಂಕಿಯಿಂದ ಕಾಡನ್ನು ರಕ್ಷಿಸುವುದು, ಲಂಟಾನ, ಯುಪಟೋರಿಯಂ, ಪಾರ್ಥೇನಿಯಂ ಮುಂತಾದ ಆಕ್ರಮಣಕಾರಿ ಕಳೆಗಳ ನಿರ್ಮೂಲನೆ ಮಾಡುವುದು, ಮೇವು ಜಾತಿಯ ಸಸ್ಯಗಳ ಪುನರುತ್ಪತ್ತಿಗೆ ಸಂಬಂಧಿಸಿದಂತೆ ಮುಳ್ಳು ಪೊದೆಗಳಲ್ಲಿ ಬೀಜಗಳ ಬಿತ್ತನೆ ಮಾಡುವುದು, ಅರಣ್ಯ ಒತ್ತುವರಿ ಹಾಗೂ ಆನೆ ಕಾರಿಡಾರ್‌ಗಳನ್ನು ತೆರವುಗೊಳಿಸುವುದು.

2. **ಪರಿಸರ ಅಭಿವೃದ್ಧಿ ಕಾರ್ಯಗಳು:**

ಆವಾಸಸ್ಥಾನಗಳ ಮೇಲಿನ ಒತ್ತಡವನ್ನು ಕಡಿಮೆ ಮಾಡಲು ರಕ್ಷಿತಾರಣ್ಯದಂಚಿನಲ್ಲಿ ವಾಸಿಸುತ್ತಿರುವ ಗ್ರಾಮಸ್ಥರಿಗೆ ಗ್ರಾಮೀಣ ಸಮಿತಿಗಳ ಮುಖಾಂತರ ಹೊಗೆ ರಹಿತ ಒಲೆಗಳ ವಿತರಣೆ, ಎಲ್‌ಪಿಜಿ ಸಂಪರ್ಕಗಳು, ಸೌರ ದೀಪಗಳ ವಿತರಣೆ ಮಾಡಲಾಗಿದೆ. ವನ್ಯಜೀವಿ ವಿಭಾಗದಲ್ಲಿ ಉದ್ಭವಿಸುವ ಎಲ್ಲಾ ಸಮಸ್ಯೆಗಳನ್ನು ಸಮರ್ಥವಾಗಿ ನಿಭಾಯಿಸುವ ಸಾಮರ್ಥ್ಯ, ಶಕ್ತಿ, ಅರ್ಹತೆ, ಗ್ರಹಿಸಬಲ್ಲ ಯೋಗ್ಯತೆಗಳನ್ನು ಇಲಾಖಾ ಸಿಬ್ಬಂದಿಗಳಲ್ಲಿ ಮೂಡಿಸುವ ಕ್ರಮವನ್ನು ತೆಗೆದುಕೊಳ್ಳುವುದು.

3. **ಮಾನವ–ಪ್ರಾಣಿ ಸಂಘರ್ಷ :**

**ಅ. ಅರಿವು ಮೂಡಿಸುವಿಕೆ ಹಾಗೂ ಜನಗಳ ತೊಡಗಿಸಿಕೊಳ್ಳುವಿಕೆ:**

ಸಂಘರ್ಷ ಉಪಶಮನಾ ಕ್ರಮಗಳ ಆಯೋಜನೆ ಮತ್ತು ಕಾರ್ಯಗತಮಾಡುವಲ್ಲಿ ಎಲ್ಲ ಬಗೆಯ ಪಾಲುದಾರರ ತೊಡಗಿಸಿಕೊಳ್ಳುವಿಕೆ (ಭಾಗವಹಿಸುವಿಕೆ) ಜನಗಳಿಂದ ಹೆಚ್ಚಿನ ಸಹಕಾರ ಹಾಗೂ ಬೆಂಬಲವನ್ನು ಗಳಿಸಲು ಅತ್ಯಾವಶ್ಯಕ ಎಂಬುದಾಗಿ ವನ್ಯಜೀವಿ ಸಂರಕ್ಷಣೆಯ ನವ್ಯ ವಿಧಾನಗಳು ಪ್ರತಿಪಾದಿಸುತ್ತವೆ.

ವನ್ಯಜೀವಿ ಸಂರಕ್ಷಣೆ ಹಾಗೂ ನಿರ್ವಹಣೆಯಲ್ಲಿ ಸ್ಥಳೀಯ ಸಮುದಾಯಗಳ ಹಾಗೂ ಇತರ ಪಾಲುದಾರರ ಬೆಂಬಲ ಹಾಗೂ ಸಹಕಾರಗಳನ್ನು ದೃಢಪಡಿಸಿಕೊಳ್ಳಲು ಸಹಯೋಗದ ನಡೆಯತ್ತ ಗಮನಹರಿಸಬೇಕು. ಅರಿವು ಮೂಡಿಸುವ ಕಾರ್ಯಕ್ರಮಗಳು ಮಾನವ ಪ್ರಾಬಲ್ಯವುಳ್ಳ ಪ್ರದೇಶಗಳಾದ ಕಬ್ಬಿನ ಗದ್ದೆಗಳು, ಕಾಫಿ ತೋಟಗಳು, ಹಣ್ಣಿನ ತೋಟಗಳು, ಮುಂತಾದವುಗಳಲ್ಲಿ ಸಂಘರ್ಷಗಳಿದ್ದು, ಸ್ಥಳೀಯ ಜನರಿಗೆ ಅರಿವು ಮೂಡಿಸುವಿಕೆಯು ಪ್ರಮುಖ ಪಾತ್ರವನ್ನು ಹೊಂದಿದೆ.

**ಆ. ಅರಿವು ಮೂಡಿಸುವ ಕಾರ್ಯಾಚರಣೆಯ ಪ್ರಧಾನ ಅಂಶಗಳು:**

1. ಸಾಮಾನ್ಯವಾಗಿ ವನ್ಯಪ್ರಾಣಿಗಳು ಜನರ ಮೇಲೆ ಆಕ್ರಮಣಶೀಲ ಪ್ರವೃತ್ತಿ ಹೊಂದಿರುವುದಿಲ್ಲ; ವಿರುದ್ಧವಾಗಿ ಅವು ಜನರಿಂದ ದೂರವಿರಲು ಬಯಸುತ್ತದೆ.
2. ಮಾಂಸಾಹಾರಿ ವನ್ಯಜೀವಿಗಳು ಆತ್ಮರಕ್ಷಣೆಗಾಗಿ ಆಕ್ರಮಣ ನಡೆಸಬಹುದು; ಆದುದರಿಂದ ಅವುಗಳನ್ನು ಉದ್ರೇಕಿಸದಿರುವುದು ಒಳಿತು.
3. ಮನುಷ್ಯರ ಆವಾಸಸ್ಥಾನಗಳಲ್ಲಿ ವನ್ಯಪ್ರಾಣಿಗಳು ಕಾಣಿಸಿಕೊಂಡಿದ್ದರಿಂದ ಮಾತ್ರಕ್ಕೆ ಅವು ಕಾಡಿನಿಂದ ತಪ್ಪಿಬಂದಿದ್ದು ಅವುಗಳನ್ನು ಸೆರೆಹಿಡಿಯಬೇಕೆಂಬ ಅಭಿಪ್ರಾಯಕ್ಕೆ ಬರಲಾಗದು.

**ಇ. ಸಂಘರ್ಷ ನಿರ್ವಹಣೆಯಲ್ಲಿ ಸಾಂಘಿಕ ಪ್ರಯತ್ನ:**

1. ಕಾಡಾನೆಗಳಿಗೆ ಅರಣ್ಯ ಪ್ರದೇಶಗಳ ಒಳಗೆ ನೀರಿನ ಸೌಕರ್ಯವನ್ನು ಸತತವಾಗಿ ಒದಗಿಸಿ, ವನ್ಯಪ್ರಾಣಿಗಳ ಆವಾಸ ಸ್ಥಾನವನ್ನು ಅಭಿವೃದ್ಧಿಗೊಳಿಸುವುದು.

2. ಅರಣ್ಯ ಪ್ರದೇಶಗಳಲ್ಲಿ ಕಾಡಾನೆಗಳಿಗೆ ವರ್ಷವಿಡೀ ಕುಡಿಯುವ ನೀರು ದೊರಕುವಂತೆ ಅರಣ್ಯದಲ್ಲಿರುವ ಕೆರೆಗಳ ಹೂಳುತೆಗೆಯುವುದು. ಗಲ್ಲಿಪ್ಲಗ್, ಚೆಕ್‌ಡ್ಯಾಮ್, ನಾಲಾಬಂಡ್, ಇತ್ಯಾದಿ ಕೆಲಸಗಳನ್ನು ರಕ್ಷಿತಾರಣ್ಯಗಳಲ್ಲಿ ತೆಗೆದುಕೊಳ್ಳುವುದು.
3. ಕಾಡಾನೆಗಳು ಅರಣ್ಯ ಪ್ರದೇಶದಿಂದ ಪಕ್ಕದ ಕೃಷಿ ಹಾಗೂ ಸಾರ್ವಜನಿಕರ ಸ್ಥಳಗಳಲ್ಲಿ ದಾಳಿ ಮಾಡುವುದನ್ನು ತಡೆಗಟ್ಟುವ ಸಲುವಾಗಿ ಸೂಕ್ಷ್ಮ ಪ್ರದೇಶಗಳ ಅರಣ್ಯದ ಅಂಚಿನಲ್ಲಿ ಕಾಡಾನೆ ನಿರೋಧಕ ಕಂದಕ ಮತ್ತು ಸೌರಶಕ್ತಿ ಬೇಲಿ ನಿರ್ಮಿಸಿ ನಿರ್ವಹಿಸುವುದು.
4. ಕಾಡಾನೆಗಳು ಪದೇ ಪದೇ ಕೃಷಿ ಜಮೀನುಗಳಿಗೆ ದಾಳಿ ಮಾಡುವ ಸೂಕ್ಷ್ಮ ಸ್ಥಳಗಳನ್ನು ಗುರುತಿಸಿ ಹಾವಳಿ ನಡೆಸುವ ಕಾಡಾನೆಗಳನ್ನು ಪುನಃ ಕಾಡಿಗೆ ಹಿಮ್ಮೆಟ್ಟಿಸುವ ಸಲುವಾಗಿ ಕಾಡಾನೆ ತಡೆ ತಂಡಗಳನ್ನು ರಚಿಸಿ, ಪ್ರತಿಯೊಂದು ತಂಡದಲ್ಲೂ ಸ್ಥಳೀಯರ ಜೊತೆಗೆ ನಾಲ್ಕು ಮಂದಿ ಅರಣ್ಯ ಸಿಬ್ಬಂದಿಗಳನ್ನು ನಿಯೋಜಿಸಿ ಕ್ರಮಕೈಗೊಳ್ಳುವುದು. .
5. ಸದರಿ ಸಿಬ್ಬಂದಿಗಳಿಗೆ ವಾಕೀ–ಟಾಕೀ, ಗನ್ ಹಾಗೂ ವಾಹನಗಳ ಸೌಲಭ್ಯಗಳನ್ನು ಕಾಡಾನೆಗಳನ್ನು ಅರಣ್ಯ ಪ್ರದೇಶಗಳಿಗೆ ಹಿಮ್ಮೆಟ್ಟಿಸಲು ಒದಗಿಸುವುದು.
6. ಸಿಬ್ಬಂದಿಗಳಿಗೆ ಪಟಾಕಿ ಇನ್ನಿತರ ಸಾಮಗ್ರಿಗಳನ್ನು ಒದಗಿಸಿ ಹಾವಳಿ ನಡೆಸುವ ಕಾಡಾನೆಗಳನ್ನು ಅರಣ್ಯ ಪ್ರದೇಶಗಳಿಗೆ ಹಿಮ್ಮೆಟ್ಟಿಸಲು ಕ್ರಮಕೈಗೊಳ್ಳುವುದು.

**ಈ. ತುರ್ತು ಪ್ರತಿಕ್ರಿಯಾ ವ್ಯವಸ್ಥೆಯ ಸ್ಥಾಪನೆ:**

1. ಕಾಡಾನೆ ಹಾವಳಿ ಹೆಚ್ಚಾಗಿ ಕಂಡುಬರುವ ಸೂಕ್ಷ್ಮ ಪ್ರದೇಶಗಳಲ್ಲಿ ಅವಶ್ಯಕತೆಗನುಗುಣವಾಗಿ Rapid Response Teams (RRT) ಗಳನ್ನು ರಚಿಸಲು ಕ್ರಮಕೈಗೊಳ್ಳುವುದು.
2. ವನ್ಯಪ್ರಾಣಿ ಹಾವಳಿ ಕಂಡುಬಂದಾಗ ಕೂಡಲೇ ಕ್ರಮ ಕೈಗೊಳ್ಳುವ ಸಂಬಂಧ ಕೇಂದ್ರ ಸ್ಥಾನದಲ್ಲಿ 24 ಗಂಟೆಗಳ ಕಾಲ ಸೇವೆ ಒದಗಿಸುವ ಸಲುವಾಗಿ ಶುಲ್ಕ ರಹಿತ ಸೇವಾ ಸಂಖ್ಯೆ (Toll Free Number) ನ್ನು ಅನುಷ್ಠಾನಗೊಳಿಸಲು Toll Free Number–1800 425 1314.

2013–14ನೇ ಸಾಲಿನಲ್ಲಿ **ಮಾನವ–ವನ್ಯಪ್ರಾಣಿ ಸಂಘರ್ಷಣೆ ತಡೆಯುವಿಕೆ** ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ ನಿಗಧಿಪಡಿಸಿದ ರೂ.2100.00 ಲಕ್ಷಗಳಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳತಕ್ಕದ್ದು.

| Sl. No | Item of expenditure | Allocation for 2013-14 Rs. In lakhs | |
|---|---|---|---|
| | | Phy. | Fin. |
| I. | PROTECTION OF ELEPHANTS | | |
| 1 | Establishment and Maintenance of Rapid Response Teams involving local people @ Rs. 3.00 lakh per No. | 80 | 240.000 |
| 2 | Capture of wild elephants, habitually spilling out into human habitation. | | 400.000 |
| 3 | Establishing Elephant Camps | 20 | 280.000 |
| | Total: | | 920.000 |
| II. | PROTECTION OF ELEPHANT HABITAT AND CORRIDORS | | |
| 1 | Desilting of Water Holes @ Rs. 0.706 lakh per No. | 30 | 30.000 |
| 2 | Creation of large size ponds in scarcity areas in Mysore E.R. to ensure water availability to elephants in dry months to prevent straying of elephants in Human localities (Unit cost 1.412 lakh) | 20 | 28.240 |
| 3 | Excavation of elephant proof trench (EPT) @ Rs. 2.525 lakh per No.km. | 90 | 227.250 |
| 4 | Maintenance of elephant proof trench (EPT) @ Rs. 0.312 lakh per Km. | 548 | 170.976 |
| 5 | Others (like purchase of seeds & dibbling of seeds, eco restoration of grass lands, development of elephant corridor etc., LS | - | 17.113 |
| | Total: | | 473.579 |

| Sl. No | Item of expenditure | Allocation for 2013-14 Rs. In lakhs | |
|---|---|---|---|
| | | Phy. | Fin. |
| III. | **ELICITING PUBLIC CO-OPERATION (including mitigating of human-elephant conflict)** | | |
| | **( Including mitigation of human-elephant conflict)** | | |
| 1 | Publicity and awareness programmes on elephant conservation (Including Elephant Day functions, hand outs etc.,) LS | - | **10.000** |
| 2 | Anti depredation units to scare elephants from villages (including supply of crackers, splash light, kerosene oil, siren etc) @ Rs. 1.40 lakh per Unit. | - | **80.000** |
| 3 | Erection of Solar fencing with the involvement of villagers @ Rs. 2.30 lakh per km. | **200** | **460.000** |
| 4 | Maintenance of Solar fencing @ Rs. 0.23 lakh per Km. | **459** | **105.570** |
| 5 | Eco-development works on the fringe of Elephant Reserve and corridors to reduce biotic pressure (LS) | | **12.000** |
| | **Total:** | | **667.570** |
| IV. | **IMPROVEMENT OF SUPPORT SERVICES (including monitoring, research and training)** | | |
| 1 | Maintenance of Roads @ Rs. 0.087 lakh per Km. | **200** | **22.000** |
| 2 | Others (Expenditure for conducting elephant censes, purchase of medicines, crimination of dead elephants, maintenance of watch tower, drilling of borewells to anti-poaching/anti-depredation camps, training, ETF meeting/visits etc.) LS | | **16.851** |
| | **Total:** | | **38.851** |
| | **G. Total:** | | **2100.000** |

ಈ ಯೋಜನೆಗೆ ತಗಲುವ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ 2406–01–800–0–15–59 (ಯೋಜನೆ)ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 16 ಪಿಎಫ್‌ಒ 2013 ದಿನಾಂಕ: 13.08.2013 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 907 ವೆಚ್ಚ–5/2013 ದಿನಾಂಕ: 27.08.2013 ರಲ್ಲಿ ಪಡೆದ ಸಹಮತಿನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR.1069**

**SC.150**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : 2013–14ನೇ ಸಾಲಿನಿಂದ ಆಯವ್ಯಯದಲ್ಲಿ ಘೋಷಿಸಲಾದ "ಬೆಂಗಳೂರು ಮತ್ತು ಇತರ ನಗರ ಪ್ರದೇಶಗಳಲ್ಲಿರುವ ಅರಣ್ಯ ಭೂಮಿ ಒತ್ತುವರಿ ತೆರವುಗೊಳಿಸಿ ಸಂರಕ್ಷಿಸುವ ಕಾರ್ಯಕ್ರಮ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ** : ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಅರಣ್ಯಪಡೆ ಮುಖ್ಯಸ್ಥರು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಪಿಸಿಸಿಎಫ್ (ಹೆಚ್‌ಒಎಫ್‌ಎಫ್) ಸಿಆರ್–65/ಡಿ–1/ಬಿಯುಡಿ/2013–14, ದಿನಾಂಕ 01–08–2013.

**ಪ್ರಸ್ತಾವನೆ:**

ಸನ್ಮಾನ್ಯ ಮುಖ್ಯ ಮಂತ್ರಿಯವರು 2013–14ನೇ ಸಾಲಿನ ಆಯವ್ಯಯದಲ್ಲಿ ಬೆಂಗಳೂರು ನಗರ ಹಾಗೂ ಹೊರವಲಯಗಳಲ್ಲಿ ಮತ್ತು ಇತರೆ ನಗರ ಪ್ರದೇಶಗಳಲ್ಲಿ ಆಗಿರುವ ಅನಧಿಕೃತ ಒತ್ತುವರಿಗಳನ್ನು ತೆರವುಗೊಳಿಸುವುದರೊಂದಿಗೆ ಮುಂದೆ ಈ ಅನಧಿಕೃತ ಒತ್ತುವರಿಗಳನ್ನು ತಡೆಕಟ್ಟಲು ಆರ್‌ಸಿಸಿ ಕಂಬಗಳನೊಳಗೊಂಡ ಚೈನ್‌ಲಿಂಕ್ ಮೇಷ್‌ಗಳನ್ನು ಅಳವಡಿಸುವ ಹಾಗೂ ಕೆಲವಡೆ ಕಪೌಂಡ್ ಗೋಡೆಗಳನ್ನು ನಿರ್ಮಿಸುವ ಕಾರ್ಯಕ್ರಮಗಳ ಸಲುವಾಗಿ

**"ಬೆಂಗಳೂರು ಮತ್ತು ಇತರ ನಗರ ಪ್ರದೇಶಗಳಲ್ಲಿರುವ ಅರಣ್ಯ ಭೂಮಿ ಒತ್ತುವರಿ ತೆರವುಗೊಳಿಸಿ ಸಂರಕ್ಷಿಸುವ ಕಾರ್ಯಕ್ರಮ"** ಎಂಬ ಹೊಸ ಯೋಜನೆಯನ್ನು ಘೋಷಿಸಿರುತ್ತಾರೆ. ಇದರನುಸಾರ 2013–14ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 2406–01–101–101–2–29–59(ಯೋಜನೆ)ಯನ್ನು ಸೃಜಿಸಿ ಇದರಡಿ ರೂ.700.00 ಲಕ್ಷಗಳ ಅನುದಾನ ನಿಗಧಿಪಡಿಸಲಾಗಿದೆ.

ಮೇಲೆ ಓದಲಾದ ದಿನಾಂಕ:01–08–2013ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ರವರು 2013–14ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಆಗಿರುವಂತೆ **"ಬೆಂಗಳೂರು ಮತ್ತು ಇತರ ನಗರ ಪ್ರದೇಶಗಳಲ್ಲಿರುವ ಅರಣ್ಯ ಭೂಮಿ ಒತ್ತುವರಿ ತೆರವುಗೊಳಿಸಿ ಸಂರಕ್ಷಿಸುವ ಕಾರ್ಯಕ್ರಮ"** ಎಂಬ ಹೊಸ ಯೋಜನೆವನ್ನು 2013–14ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2406–01–101–101–2–29–59(ಯೋಜನೆ)ರಡಿ ಒದಗಿಸಿರುವ ರೂ.700.00 ಲಕ್ಷಗಳಲ್ಲಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಿ, ಪ್ರಸಕ್ತ ಸಾಲಿಗೆ ಲಭ್ಯವಿರುವ ರೂ.700.00 ಲಕ್ಷಗಳ ಅನುದಾನವನ್ನು ವಿನಿಯೋಗಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 125 ಎಫ್‌ಎಪಿ 2013, ಬೆಂಗಳೂರು, ದಿನಾಂಕ: 25–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರಾಜ್ಯ ಸರ್ಕಾರವು 2013–14ನೇ ಸಾಲಿನಿಂದ ಜಾರಿಗೆ ಬರುವಂತೆ ರಾಜ್ಯದಲ್ಲಿ **"ಬೆಂಗಳೂರು ಮತ್ತು ಇತರ ನಗರ ಪ್ರದೇಶಗಳಲ್ಲಿರುವ ಅರಣ್ಯ ಭೂಮಿ ಒತ್ತುವರಿ ತೆರವುಗೊಳಿಸಿ ಸಂರಕ್ಷಿಸುವ ಕಾರ್ಯಕ್ರಮ"** ಎಂಬ ಹೊಸ ಯೋಜನೆಯನ್ನು ಜಾರಿಗೆ ತರಲು ಅನುಮೋದನೆ ನೀಡಿದೆ.

2013–14ನೇ ಸಾಲಿನಲ್ಲಿ **"ಬೆಂಗಳೂರು ಮತ್ತು ಇತರ ನಗರ ಪ್ರದೇಶಗಳಲ್ಲಿರುವ ಅರಣ್ಯ ಭೂಮಿ ಒತ್ತುವರಿ ತೆರವುಗೊಳಿಸಿ ಸಂರಕ್ಷಿಸುವ ಕಾರ್ಯಕ್ರಮ"** ಕ್ಕಾಗಿ ಆಯವ್ಯಯದಲ್ಲಿ ನಿಗಧಿಪಡಿಸಿದ ರೂ.700.00 ಲಕ್ಷಗಳಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳತಕ್ಕದ್ದು.

1 ನಗರ ಪ್ರದೇಶಗಳಲ್ಲಿ ರೂ. 10,000 ಕೋಟಿ ಮೌಲ್ಯದ 600 ಹೆ. ಅರಣ್ಯ ಪ್ರದೇಶಗಳ ಸ್ವಾಧೀನಪಡಿಸುವಿಕೆ.

2 ನಗರ ಪ್ರದೇಶಗಳಲ್ಲಿನ ಜಲಸಂಪನ್ಮೂಲಗಳ ಸಂರಕ್ಷಣೆ.

3 ಜೀವಿ ವೈವಿಧ್ಯ ಸಂರಕ್ಷಣೆ ಹಾಗೂ ನಗರ ಪ್ರದೇಶಗಳಲ್ಲಿನ ಪರಿಸರ ಸಂರಕ್ಷಣೆ.

4 ಪರಿಸರದ ಬಗ್ಗೆ ನಾಗರಿಕರಲ್ಲಿ ಅರಿವು ಮೂಡಿಸುವುದು.

5 ಹವಮಾನದಲ್ಲಿ ಸುಧಾರಣೆ

6 ಒತ್ತುವರಿ ತಡೆಗಟ್ಟುವುದು.

**ಈ ಯೋಜನೆಯ ಭೌತಿಕ ಮತ್ತು ಆರ್ಥಿಕ ಗುರಿಗಳ ವಿವರಗಳು:–**

| **ವೃತ್ತ.** | | **ಕಾಮಗಾರಿಗಳ ವಿವರ.** | **ಯೂನಿಟ್‌ಕಾಸ್ಟ್. (ರೂ. ಲಕ್ಷದಲ್ಲಿ/ ಕಿ.ಮೀ).** | **ಭೌತಿಕ. (ಕಿ.ಮೀ).** | **ಆರ್ಥಿಕ (ರೂ.ಲಕ್ಷದಲ್ಲಿ)** |
|---|---|---|---|---|---|
| ಬೆಂಗಳೂರು | **1.** | ಕಾಪೌಂಡ್‌ಗೋಡೆ (4 ಅಡಿ ಎತ್ತರ) | 30.00 | 10 | 300.00 |
| | **2.** | ಆರ್‌ಸಿಸಿ ಕಂಬಗಳನೊಳಗೊಂಡಂತಹ ಚೈನ್‌ಲಿಂಕ್ ಮೆಷ್‌ಗಳು. | 17.00 | 10 | 170.00 |
| ಶಿವಮೊಗ್ಗ | | ಆರ್‌ಸಿಸಿ ಕಂಬಗಳನೊಳಗೊಂಡಂತಹ ಚೈನ್‌ಲಿಂಕ್ ಮೆಷ್‌ಗಳು. | 17.00 | 13.5 | 230.00 |
| | | **ಒಟ್ಟು ಮೊತ್ತ** | – | **33.5ಕಿ.ಮೀ** | **700.00** |

ಈ ಯೋಜನೆಗೆ ತಗಲುವ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ 2406–01–101–101–2–29–59 (ಯೋಜನೆ)ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 20 ಪಿಎಫ್‌ಒ 2013 ದಿನಾಂಕ: 16.08.2013 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 908 ವೆಚ್ಚ–5/2013 ದಿನಾಂಕ: 27.08.2013ರಲ್ಲಿ ಪಡೆದ ಸಹಮತಿಸ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR.1070**

**SC.150**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ಅರಣ್ಯ ಇಲಾಖೆಯಲ್ಲಿ "ಸಿರಿ ಚಂದನ ವನ" ಎಂಬ ಹೊಸ ಯೋಜನೆ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ** : ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, (ಅರಣ್ಯಪಡೆ ಮುಖ್ಯಸ್ಥರು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಬಿ5/ಶ್ರೀಗಂಧ/ಸಿಆರ್–5/2011-12, ದಿನಾಂಕ 03–07–2012.

**ಪ್ರಸ್ತಾವನೆ:**

ಸನ್ಮಾನ್ಯ ಮುಖ್ಯ ಮಂತ್ರಿಯವರು 2013–14ನೇ ಸಾಲಿನ ಆಯವ್ಯಯದಲ್ಲಿ ಶೀಘ್ರವಾಗಿ ನಶಿಸಿ ಹೋಗುತ್ತಿರುವ ರಾಜ್ಯದ ಹೆಮ್ಮೆಯ ಪ್ರತೀಕವಾದ ಶ್ರೀಗಂಧವನ್ನು ಪುನರುಜ್ಜೀವನಗೊಳಿಸಲು ಸಿರಿ ಚಂದನ ವನ ಎಂಬ ಯೋಜನೆಯನ್ನು ಪ್ರಾರಂಭಿಸಿ ರೂ. 546.81 ಲಕ್ಷಗಳನ್ನು ಒದಗಿಸಲಾಗುವುದು ಎಂಬುದಾಗಿ ಘೋಷಿಸಿರುತ್ತಾರೆ. ಇದರನುಸಾರ 2013–14ನೇ ಸಾಲಿನ ರಾಜ್ಯ ವಲಯ ಯೋಜನಾ ಲೆಕ್ಕ ಶೀರ್ಷಿಕೆ 2406–01–101–2–24–059 (ಯೋಜನೆ)ರಡಿ ರೂ.546.81 ಲಕ್ಷಗಳ ಆಯವ್ಯಯ ಅನುದಾನ ನಿಗಧಿಪಡಿಸಲಾಗಿದೆ.

ಮೇಲೆ 1ರಲ್ಲಿ ಓದಲಾದ ದಿನಾಂಕ: 03.07.2012ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ರವರು ರಾಜ್ಯದಲ್ಲಿ 2013–14ನೇ ಸಾಲಿನಿಂದ **"ಸಿರಿ ಚಂದನ ವನ"** ಎಂಬ ಯೋಜನೆಯನ್ನು ಐದು ವರ್ಷಗಳ ಅವಧಿಗೆ ರೂ.9,353.55 ಲಕ್ಷಗಳ ವೆಚ್ಚದಲ್ಲಿ ಅನುಷ್ಠಾನಗೊಳಿಸಲು ಹಾಗೂ ಪ್ರಸಕ್ತ ಸಾಲಿನ ಆಯವ್ಯಯದ ರಾಜ್ಯ ವಲಯ ಯೋಜನಾ ಲೆಕ್ಕ ಶೀರ್ಷಿಕೆಯಡಿ ಒದಗಿಸಲಾಗಿರುವ ರೂ.546.81 ಲಕ್ಷಗಳ ಅನುದಾನವನ್ನು ವಿನಿಯೋಗಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 77 ಎಫ್‌ಎಪಿ 2013, ಬೆಂಗಳೂರು, ದಿನಾಂಕ: 24–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ರಾಜ್ಯದಲ್ಲಿ 2013–14ನೇ ಸಾಲಿನಿಂದ **"ಸಿರಿ ಚಂದನ ವನ"** ಎಂಬ ಯೋಜನೆಯನ್ನು ಐದು ವರ್ಷಗಳ ಅವಧಿಗೆ ಒಟ್ಟು ರೂ. 9,353.55 (ಒಂಬತ್ತು ಸಾವಿರದ ಮೂರುನೂರ ಐವತ್ಮೂರು ಲಕ್ಷದ ಐವತ್ತೈದು ಸಾವಿರ ರೂಪಾಯಿಗಳು ಮಾತ್ರ) ಲಕ್ಷಗಳ ಆಯವ್ಯಯದಲ್ಲಿ ಅನುಷ್ಠಾನಗೊಳಿಸಲು ಹಾಗೂ 2013–14ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಪ್ರಸಕ್ತ ಸಾಲಿಗೆ ರೂ. 546.81 (ಐದು ನೂರ ನಲ್ವತ್ತಾರು ಲಕ್ಷದ ಎಂಬತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಲಕ್ಷಗಳ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ನೀಡಿದೆ.

**ಯೋಜನೆಯ ರೂಪುರೇಷೆಗಳು:–**

(1) ಸ್ವಾಭಾವಿಕವಾಗಿ ಶ್ರೀಗಂಧ ಬೆಳೆಯುವ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ 5000 ಹೆಕ್ಟೇರ್ ಅರಣ್ಯ ಪ್ರದೇಶದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸುವುದು.

(2) ಈ ಯೋಜನೆಯಲ್ಲಿ ಐದು ವರ್ಷಗಳಿಗೆ ಒಟ್ಟು ರೂ.9353.55 ಲಕ್ಷಗಳ ಅನುದಾನ ಒದಗಿಸಲಾಗುವುದು.

(3) 3500 ಹೆಕ್ಟೇರ್ ಕ್ಷೀಣಿತ ಅರಣ್ಯ ಪ್ರದೇಶದಲ್ಲಿ ಮತ್ತು ಹಳೆಯ ನೆಡುತೋಪು ಕತ್ರಾವಣೆ ಮಾಡುವ ಪ್ರದೇಶದಲ್ಲಿ ಶ್ರೀಗಂಧ ಎಸ್ಟೇಟ್ ನಿರ್ಮಿಸುವುದು.

(i) ಪ್ರತಿ ಜಿಲ್ಲೆಯಲ್ಲಿ ಅಂದಾಜು 100 ಹೆ. ಎಸ್ಟೇಟ್ ಮಾದರಿಯಲ್ಲಿ ಶ್ರೀಗಂಧ ಬೆಳೆಸಲು ಸೂಕ್ತ ಪ್ರದೇಶವನ್ನು ಆಯ್ಕೆ ಮಾಡಿ ಅಭಿವೃದ್ಧಿಪಡಿಸುವುದು.

(ii) ಈ ಪ್ರದೇಶದಲ್ಲಿ ಶ್ರೀಗಂಧದ ಪುನರುತ್ಪತ್ತಿ ಕಡಿಮೆ ಇರುವ ಪ್ರದೇಶದಲ್ಲಿ ಪ್ರತಿ ಹೆಕ್ಟೇರಿಗೆ 400ರಂತೆ ಉತ್ತಮ ಗುಣಮಟ್ಟದ ಸಸಿಗಳನ್ನು ನೆಟ್ಟು ಎಸ್ಟೇಟ್ ಮಾದರಿಯಲ್ಲಿ ಪೋಷಿಸಿ ಐದು ವರ್ಷಗಳವರೆಗೆ ನಿರ್ವಹಣೆ ಮಾಡುವುದು.

(4) 1500 ಹೆ. ಸ್ವಾಭಾವಿಕವಾಗಿ ಬೆಳೆದಿರುವ ಶ್ರೀಗಂಧ ಪ್ರದೇಶವನ್ನು ಗುರುತು ಮಾಡಿ, ಚೈನ್‌ಲಿಂಕ್ ಮೆಷ್ ನಿರ್ಮಿಸಿ ಸೂಕ್ತವಾದ ರಕ್ಷಣೆ ಒದಗಿಸುವುದು.

(i) ಈ ಪ್ರದೇಶದಲ್ಲಿ ಪ್ರತಿ 50 ಹೆ. ಪ್ರದೇಶಕ್ಕೆ 6 ಜನ ಕಾವಲು ಸಿಬ್ಬಂದಿಯನ್ನು ನೇಮಿಸಿ ಹಗಲು–ರಾತ್ರಿ ಗಸ್ತು ಏರ್ಪಡಿಸುವುದು.

(ii) ಕಾವಲು ಪಡೆಗೆ ಬೇಕಾದ ಶಸ್ತ್ರಾಸ್ತ್ರ ಪೂರೈಕೆ ಮತ್ತು ರೇಷನ್ ಪೂರೈಕೆ.

(iii) ಈ ಪ್ರದೇಶಕ್ಕೆ ಹೊಂದಿಕೊಂಡಂತೆ ರಕ್ಷಣಾ ಸಿಬ್ಬಂದಿ ವಸತಿ ಗೃಹ ನಿರ್ಮಾಣ.

(iv) ಈ ಪ್ರದೇಶದ ಮರಗಳ ಪೊದೆಗಳಲ್ಲಿ ಪ್ರತಿವರ್ಷ ಶ್ರೀಗಂಧದ ಬೀಜಗಳನ್ನು ನೆಟ್ಟು ಪುನರುತ್ಪತ್ತಿ ಹೆಚ್ಚಿಸುವುದು.

(5) ಶ್ರೀ ಗಂಧದ ಸಸಿಗಳನ್ನು ಸಾರ್ವಜನಿಕರಿಗೆ ರಿಯಾಯಿತಿ ದರದಲ್ಲಿ ಪೂರೈಸುವುದು.

(i) ಪ್ರತಿ ವರ್ಷ 10 ಲಕ್ಷ ಉತ್ತಮ ಗುಣಮಟ್ಟದ ಸಸಿಗಳನ್ನು ರಿಯಾಯಿತಿ ದರದಲ್ಲಿ ಪೂರೈಸುವುದು.

(ii) ಸಂಶೋಧನಾ ವಿಭಾಗದಿಂದ ಉತ್ತಮ ಗುಣಮಟ್ಟದ ತಾಯಿ ಮರಗಳಿಂದ ಬೀಜ ಸಂಗ್ರಹಣೆ.

(iii) ಬದುಕುಳಿದ ಪ್ರತಿ ಸಸಿಗೆ ಕೃಷಿ ಅರಣ್ಯ ಪ್ರೋತ್ಸಾಹ ಯೋಜನೆಯನ್ವಯ ಪ್ರೋತ್ಸಾಹ ಧನ.

(6) ತರಬೇತಿ, ಸಂಶೋಧನೆ, ಮೌಲ್ಯಮಾಪನ, ಪ್ರಚಾರ ಮತ್ತು ವಿಸ್ತರಣೆ, ಚಟುವಟಿಕೆಗಳನ್ನು ಪ್ರತಿ ವರ್ಷ ಕೈಗೊಳ್ಳಲಾಗುವುದು.

(i) ಶ್ರೀಗಂಧದ ಉತ್ತಮ ತಳಿ ಮರಗಳ ಗುರುತಿಸುವಿಕೆ.

(ii) ರೋಗ ಮತ್ತು ಕೀಟಗಳ ಹತೋಟಿ ಕ್ರಮಗಳು.

(iii) ಬಯೋಪೈರಸಿ ನಿಯಂತ್ರಣ ವ್ಯವಸ್ಥೆ.

(iv) ಶ್ರೀಗಂಧ ಕೃಷಿ ಅರಣ್ಯ ಪ್ರೋತ್ಸಾಹಿಸಲು ಪ್ರಚಾರ ಮತ್ತು ವಿಸ್ತರಣಾ ಕ್ರಮ ಕೈಗೊಳ್ಳುವುದು.

(v) ಎಲ್ಲಾ ಸಿಬ್ಬಂದಿ, ಪ್ರಗತಿಪರ ರೈತರು, ಗ್ರಾಮ ಅರಣ್ಯ ಸಂಸ್ಥೆ ಸದಸ್ಯರಿಗೆ ಸೂಕ್ತ ತರಬೇತಿ ನೀಡುವುದು.

(vi) ಈ ಯೋಜನೆಯನ್ನು ಪ್ರತಿ ವರ್ಷ ಮೌಲ್ಯಮಾಪನಕ್ಕೆ ಒಳಪಡಿಸುವುದು.

**ಯೋಜನೆಯ ಭೌತಿಕ ಗುರಿಗಳು**

(i) ಒಟ್ಟು ಅಭಿವೃದ್ಧಿಪಡಿಸಬೇಕಾದ ವಿಸ್ತೀರ್ಣ–5000 ಹೆಕ್ಟೇರ್

ಅ) ಒಟ್ಟು ಶ್ರೀಗಂಧ ಎಸ್ಟೇಟ್ ನಿರ್ಮಿಸಬೇಕಾದ ವಿಸ್ತೀರ್ಣ–3500 ಹೆಕ್ಟೇರ್

ಆ) ಒಟ್ಟು ಶ್ರೀಗಂಧ ಪುನರತ್ಪತ್ತಿ ರಕ್ಷಣೆ ವಿಸ್ತೀರ್ಣ –1500 ಹೆಕ್ಟೇರ್

(ii) ಸಾರ್ವಜನಿಕ ಪೂರೈಸಲು ಬೆಳೆಸಬೇಕಾದ ಶ್ರೀಗಂಧದ ಸಸಿಗಳು–50 ಲಕ್ಷ

(iii) ಒಟ್ಟು ನೆಡಬೇಕಾದ ಶ್ರೀಗಂಧದ ಸಸಿಗಳು–15.40 ಲಕ್ಷ

(iv) ತರಬೇತಿ, ಸಂಶೋಧನೆ, ಮೌಲ್ಯಮಾಪನ, ಪ್ರಚಾರ ಮತ್ತು ವಿಸ್ತರಣೆ.

**ಯೋಜನೆ ಅಂದಾಜು ವೆಚ್ಚ:–**

| ವರ್ಷ | ಶ್ರೀಗಂಧ ಎಸ್ಟೇಟ್ (3500 ಹೆ.) | ಶ್ರೀಗಂಧ ಪುನರತ್ಪತ್ತಿ ರಕ್ಷಣೆ (1500 ಹೆ.) | ಸಾರ್ವಜನಿಕ ಪೂರೈಸಲು ಬೆಳೆಸಬೇಕಾದ ಶ್ರೀಗಂಧದ ಸಸಿಗಳು (50.00 ಲಕ್ಷ) | ತರಬೇತಿ, ಸಂಶೋಧನೆ, ಮೌಲ್ಯಮಾಪನ, ಪ್ರಚಾರ ಮತ್ತು ವಿಸ್ತರಣೆ. | ಒಟ್ಟು |
|---|---|---|---|---|---|
| 2013–14 | 779.25 | 977.87 | 94.33 | 37.00 | 1,888.45 |
| 2014–15 | 1,173.72 | 1,128.43 | 128.77 | 48.60 | 2,479.52 |
| 2015–16 | 1,398.43 | 1,298.51 | 139.94 | 56.70 | 2,893.58 |
| 2016–17 | 851.52 | 188.29 | 151.35 | 23.80 | 1,214.96 |
| 2017–18 | 493.94 | 202.86 | 163.05 | 17.20 | 877.04 |
| **ಒಟ್ಟು** | **4,696.86** | **3,795.96** | **677.44** | **183.30** | **9,353.55** |

ಸದರಿ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2406–01–101–2–24–59 (ಯೋಜನೆ)ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 14 ಪಿಎಫ್ಒ 2012, ದಿನಾಂಕ: 04–12–2012 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 60 ವೆಚ್ಚ–5/2013, ದಿನಾಂಕ 25–02–2013ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR.1065**
**SC.150**

## ಇಂಧನ ಸಚಿವಾಲಯ

**ವಿಷಯ:** ಮೆ॥ ಮಂಚುಕೊಂಡ ಆಗ್ರೋಟೆಕ್ ಪ್ರೈವೇಟ್ ಲಿಮಿಟೆಡ್ ರವರಿಗೆ ರಾಯಚೂರು ಜಿಲ್ಲೆಯ ರಾಯಚೂರು ಗ್ರೋಥ್ ಸೆಂಟರ್‌ನಲ್ಲಿ 5.00 ಮೆ.ವ್ಯಾ. (ಗ್ರಾಸ್) ಹಾಗೂ 2.00 ಮೆ.ವ್ಯಾ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ಸಹ–ವಿದ್ಯುತ್ ಘಟಕ ಸ್ಥಾಪನೆಗೆ ನಿರಾಕ್ಷೇಪಣೆ ನೀಡುವ ಕುರಿತು.

**ಓದಲಾಗಿದೆ:** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಬಯೋ& ಕೊಜೆನ್/ಎಂ.ಎ.ಎನ್:ಎಫ್–193/2012–13/802 ದಿನಾಂಕ: 30.06.2012.1.

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಮಂಚುಕೊಂಡ ಆಗ್ರೋಟೆಕ್ ಪ್ರೈವೇಟ್ ಲಿಮಿಟೆಡ್ ರವರಿಗೆ ರಾಯಚೂರು ಜಿಲ್ಲೆಯ ರಾಯಚೂರು ಗ್ರೋಥ್ ಸೆಂಟರ್‌ನಲ್ಲಿ 5.00 ಮೆ.ವ್ಯಾ. (ಗ್ರಾಸ್) ಹಾಗೂ 2.00 ಮೆ.ವ್ಯಾ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ಸಹ–ವಿದ್ಯುತ್ ಘಟಕ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 206 ಎನ್‌ಸಿಇ 2012, ಬೆಂಗಳೂರು, ದಿನಾಂಕ: 19.07.2012.**

ಮೆ॥ ಮಂಚುಕೊಂಡ ಆಗ್ರೋಟೆಕ್ ಪ್ರೈವೇಟ್ ಲಿಮಿಟೆಡ್ ರವರಿಗೆ ರಾಯಚೂರು ಜಿಲ್ಲೆಯ ರಾಯಚೂರು ಗ್ರೋಥ್ ಸೆಂಟರ್‌ನಲ್ಲಿ 5.00 ಮೆ.ವ್ಯಾ. (ಗ್ರಾಸ್) ಹಾಗೂ 2.00 ಮೆ.ವ್ಯಾ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ಸಹ–ವಿದ್ಯುತ್ ಘಟಕ ಸ್ಥಾಪಿಸಲು ಈ ಕೆಳಗಿನ ಷರತ್ತಿಗೊಳಪಟ್ಟು **ನಿರಾಕ್ಷೇಪಣೆಯನ್ನು** ನೀಡಲಾಗಿದೆ :–

1. ಅಭಿವೃದ್ಧಿದಾರರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ ವಿದ್ಯುತ್ ರವಾನೆ ವ್ಯವಸ್ಥೆ ಸಂಬಂಧ (Evacuation of Power) ಪ್ರತ್ಯೇಕವಾಗಿ ಅನುಮೋದನೆ ಪಡೆಯತಕ್ಕದ್ದು.
2. ಅಭಿವೃದ್ಧಿದಾರರು ಗುಲ್ಬರ್ಗಾ ವಿದ್ಯುತ್ ಸರಬಜಾರು ಕಂಪನಿಯೊಂದಿಗೆ 2.00 ಮೆ.ವ್ಯಾ. ವಿದ್ಯುತ್ ಸರಬರಾಜಿಗೆ ಸಂಬಂಧಿಸಿದಂತೆ ವಿದ್ಯುತ್ ಖರೀದಿ ಒಪ್ಪಂದವನ್ನು (ಪಿಪಿಎ) ಮಾಡಿಕೊಳ್ಳತಕ್ಕದ್ದು
3. ಈ ಘಟಕಕ್ಕೆ ಸಂಬಂಧಿಸಿದಂತೆ ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆಯ ಅವಶ್ಯಕತೆಯಿದೆಯೋ ಅಂದರೆ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತಿತರ ಇಲಾಖೆಗಳಿಂದ ಅನುಮೋದನೆ ಪಡೆಯತಕ್ಕದ್ದು.
4. ಈ ಘಟಕವನ್ನು ಅನುಷ್ಠಾನಗೊಳಿಸುವ ಮುನ್ನ ಅಭಿವೃದ್ಧಿದಾರರು ವಿಸ್ತೃತ ಯೋಜನಾ ವರದಿಯನ್ನು (ಡಿ.ಪಿ.ಆರ್.) ತಯಾರಿಸಿ ಕೆ.ಆರ್.ಇ.ಡಿ.ಎಲ್. ಸಂಸ್ಥೆಯಿಂದ ಅನುಮೋದನೆ ಪಡೆಯತಕ್ಕದ್ದು.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**PR.964**
**SC.25**

## ಆರೋಗ್ಯ & ಕುಟುಂಬ ಕಲ್ಯಾಣ ಸಚಿವಾಲಯ

**ಸಂಖ್ಯೆ: ಆಕುಕ 334 ಆರ್‌ಜಿಯು 2013,ಬೆಂಗಳೂರು, ದಿ: 23–11–2013**

**ಅಧಿಸೂಚನೆ**

ವೈದ್ಯಕೀಯ ಮತ್ತು ದಂತ ವೈದ್ಯಕೀಯ ಸ್ನಾತಕೋತ್ತರ ಕೋರ್ಸುಗಳು ಡಿಗ್ರಿ ಮತ್ತು ಡಿಪ್ಲೊಮಾ ಕೋರ್ಸುಗಳನ್ನು ಹೊಂದಿದ್ದು, 2013–14 ನೇ ಸಾಲಿನಲ್ಲಿ ಒಟ್ಟು 1807 ಸ್ನಾತಕೋತ್ತರ ವೈದ್ಯಕೀಯ ಡಿಗ್ರಿ ಸೀಟುಗಳನ್ನು ಹಾಗೂ 858 ಸ್ನಾತಕೋತ್ತರ ದಂತ ವೈದ್ಯಕೀಯ ಡಿಗ್ರಿ ಸೀಟುಗಳು ಮತ್ತು 487 ಸ್ನಾತಕೋತ್ತರ ವೈದ್ಯಕೀಯ ಡಿಪ್ಲೊಮಾ ಸೀಟುಗಳು ಹಾಗೂ 16 ಸ್ನಾತಕೋತ್ತರ ದಂತ ವೈದ್ಯಕೀಯ ಡಿಪ್ಲೊಮಾ ಸೀಟುಗಳಿರುತ್ತವೆ. ಅದರಲ್ಲಿ 1023 ಸೀಟುಗಳು ಸರ್ಕಾರಿ ಕೋಟಾದಡಿ ಪರೀಕ್ಷೆ ಮತ್ತು ಕೌನ್ಸಿಲಿಂಗ್ ಮೂಲಕ ಹಂಚಿಕೆಯಾಗಿವೆ. ಈ ಸರ್ಕಾರಿ ಕೋಟಾದ ಸೀಟುಗಳಲ್ಲಿ 30% ಸೀಟುಗಳನ್ನು ಸೇವಾನಿರತ ಕೋಟಾದ ಅಭ್ಯರ್ಥಿಗಳಿಗೆ ಮೀಸಲಿಡಲಾಗಿದೆ. ಇಲ್ಲಿಯವರೆಗೆ ಸ್ನಾತಕೋತ್ತರ ವೈದ್ಯಕೀಯ / ದಂತ ವೈದ್ಯಕಿಯ ಡಿಗ್ರಿ / ಡಿಪ್ಲೊಮಾ ಕೋರ್ಸುಗಳ ಸರ್ಕಾರಿ ಕೋಟಾದ ಸೀಟುಗಳ ಪ್ರವೇಶಾತಿಯನ್ನು ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಡಿಗ್ರಿ ಮತ್ತು ಡಿಪ್ಲೊಮಾ ಕೋರ್ಸುಗಳಿಗೆ ಸ್ನಾತಕೋತ್ತರ ಪ್ರವೇಶ ಪರೀಕ್ಷೆ ನಿಯಮಗಳು, 2006 ಹಾಗೂ ಈ ಅಧಿನಿಯಮಕ್ಕೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳೊಂದಿಗೆ ನಡೆಲಾಗುತ್ತಿತ್ತು. ಈ ಪ್ರವೇಶಾತಿಗಳು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆ ಹಾಗೂ ಕೌನ್ಸಿಲಿಂಗ್ ಆಧಾರದ ಮೇಲೆ ಮಾಡಲಾಗುತ್ತಿತ್ತು. ಸರ್ಕಾರಿ ಕೋಟಾದ ಸೀಟುಗಳು ವೈದ್ಯಕೀಯ ಶಿಕ್ಷಣ ಇಲಾಖೆಯು ವಿವಿಧ ಖಾಸಗಿ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಸಂಘಗಳೊಂದಿಗೆ ಮಾಡಿಕೊಳ್ಳುವ ಪರಸ್ಪರ ಒಡಂಬಡಿಕೆಯಂತೆ ಲಭ್ಯವಾಗುತ್ತಿತ್ತು.

ಇನ್ನುಳಿದಂತೆ ಅನುದಾನರಹಿತ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕಾಲೇಜುಗಳು, ಡೀಮ್ಡ್ ವಿಶ್ವವಿದ್ಯಾಲಯಗಳು ಹಾಗೂ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳೂ ಸೇರಿದಂತೆ ವೃತ್ತಿಪರ ಶಿಕ್ಷಣ ಸಂಸ್ಥೆಗಳು ಸರ್ಕಾರಿ ಕೋಟಾ ಹೊರತಾದ ಸ್ನಾತಕೋತ್ತರ ಡಿಗ್ರಿ/ಡಿಪ್ಲೊಮಾ ಸೀಟುಗಳಿಗೆ ತಮ್ಮದೇ ಆದ ಸ್ವಂತ ಪ್ರವೇಶ ಪರೀಕ್ಷೆಗಳನ್ನು ನಡೆಸುತ್ತಿವೆ ಅಥವಾ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಸಂಘಗಳೊಂದಿಗೆ ಗುರುತಿಸಿಕೊಂಡಿರುವ ಸಂಸ್ಥೆಗಳು ಸಾಮಾನ್ಯ ಪ್ರವೇಶ ಪರೀಕ್ಷೆಯನ್ನು ನಡೆಸುತ್ತಿದ್ದು, ಸದರಿ ಪರೀಕ್ಷೆಯ ಮೂಲಕ ತಮ್ಮ ಕೋಟಾದ ಸೀಟುಗಳನ್ನು ಭರ್ತಿ ಮಾಡಿಕೊಳ್ಳುತ್ತಿವೆ. ಇದರೊಂದಿಗೆ ಆಡಳಿತ ಮಂಡಳಿ ಮತ್ತು ಎನ್.ಆರ್.ಐ ಕೋಟಾದಡಿಯೂ ಸಹ ಭರ್ತಿ ಮಾಡಿಕೊಳ್ಳುತ್ತವೆ.

ಸಾರ್ವಜನಿಕ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ವೃತ್ತಿಪರ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿಯನ್ನು ಒದಗಿಸುವುದು ಹಾಗೂ ರಾಜ್ಯ ಮೀಸಲಾತಿ ನಿಯಮಾವಳಿಯನ್ವಯ ಸೀಟುಗಳ ಮೀಸಲಾತಿಯನ್ನು ಒದಗಿಸುವುದು ತುಂಬಾ ಅಗತ್ಯವಿರುವುದರಿಂದ ಸ್ನಾತಕೋತ್ತರ ಕೋರ್ಸುಗಳಿಗೆ ಪ್ರವೇಶಾತಿಯನ್ನು ಬಯಸುವ ಎಲ್ಲಾ ವಿದ್ಯಾರ್ಥಿಗಳಿಗೆ ಅರ್ಹತೆ ಮತ್ತು ಮೀಸಲಾತಿಯನ್ವಯ ಪ್ರವೇಶಾತಿಯಲ್ಲಿ ಸಮಾನತೆ ಹಾಗೂ ಸಮಾನ ಅವಕಾಶ ನೀಡಬೇಕಾಗಿರುತ್ತದೆ. ದಿನಾಂಕ: 22–08–2013 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ 2014–15 ನೇ ಸಾಲಿನಿಂದ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಅಧಿನಿಯಮ 8, 2006 ಅಂದರೆ ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ನ್ನು ಜಾರಿಗೆ ತರಲು ನಿರ್ಧರಿಸಲಾಗಿದೆ.

ಸದರಿ ಅಧಿನಿಯಮದ ಕಲಂ 2 (ಪಿ) ರನ್ವಯ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣ ಕೋರ್ಸು ಎನ್ನುವುದನ್ನು ಈ ಕೆಳಗಿನಂತೆ ವ್ಯಾಖ್ಯಾನಿಸಲಾಗಿದೆ.

I. ವೈದ್ಯಕೀಯ ಮತ್ತು ದಂತ ವೈದ್ಯಕೀಯ ಸಂಸ್ಥೆಗಳಲ್ಲಿ ಪ್ರಥಮ ವರ್ಷದ
   i) ಬ್ಯಾಚುಲರ್ ಆಫ್ ಮೆಡಿಸಿನ್ & ಬ್ಯಾಚುಲರ್ ಆಫ್ ಸರ್ಜರಿ ಮತ್ತು
   ii) ಬ್ಯಾಚುಲರ್ ಆಫ್ ಡೆಂಟಲ್ ಸರ್ಜರಿ.

ಆದಾಗ್ಯೂ "ರಾಜ್ಯ ಸರ್ಕಾರವು ಅಧಿಸೂಚಿಸಿರುವ ಸೂಪರ್ ಸ್ಪೆಷಾಲಿಟಿ ಕೋರ್ಸುಗಳನ್ನೂ ಒಳಗೊಂಡಂತೆ ಸ್ನಾತಕ ಮತ್ತು ಸ್ನಾತಕೋತ್ತರ ಮಟ್ಟದ ವೃತ್ತಿಪರ ಶಿಕ್ಷಣ ಕೋರ್ಸುಗಳು" ಎಂಬ ಪರಂತುಕವನ್ನು ಸಹ ಸೇರಿಸಲಾಗಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಪ್ರಥಮ ವರ್ಷದ ಸ್ನಾತಕೋತ್ತರ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಡಿಗ್ರಿ ಮತ್ತು ಡಿಪ್ಲೊಮಾ ಕೋರ್ಸುಗಳನ್ನು ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರಡಿ ಬರುವ ವೃತ್ತಿಪರ ಶಿಕ್ಷಣ ಕೋರ್ಸುಗಳೊಂದಿಗೆ ಸೇರಿಸಿ ಅಧಿಸೂಚನೆ ಹೊರಡಿಸಲು ಅನುಮೋದನೆ ಕೋರಿ ದಿನಾಂಕ: 21–11–2013 ರಂದು ನಡೆದ ಸಚಿವ ಸಂಪುಟದ ಮುಂದೆ ಮಂಡಿಸಿದ್ದು, ಪ್ರಕರಣ ಸಂಖ್ಯೆ: ಸಿ: 804/2013 ರನ್ವಯ ಸಚಿವ ಸಂಪುಟವು ಅನುಮೋದಿಸಿರುತ್ತದೆ.

ಆದ್ದರಿಂದ ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರ ಕಲಂ (ಪಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಥಮ ವರ್ಷದ ಸ್ನಾತಕೋತ್ತರ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಡಿಗ್ರಿ ಮತ್ತು ಡಿಪ್ಲೊಮಾ ಕೋರ್ಸುಗಳನ್ನು ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರಡಿ ಬರುವ ವೃತ್ತಿಪರ ಶಿಕ್ಷಣ ಕೋರ್ಸುಗಳೊಂದಿಗೆ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಬೂಬ್ ಖಾನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ & ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**P.R. 1210**

**SC - 50**

## ಆರೋಗ್ಯ & ಕುಟುಂಬ ಕಲ್ಯಾಣ ಸಚಿವಾಲಯ

**ಸಂಖ್ಯೆ: ಆಕುಕ 335 ಆರ್‌ಜಿಯು 2013, ಬೆಂಗಳೂರು, ದಿ: 23–11–2013**

**ಅಧಿಸೂಚನೆ**

ಸ್ನಾತಕೋತ್ತರ ಸೂಪರ್ ಸ್ಪೆಷಾಲಿಟಿ ಕೋರ್ಸುಗಳು ಅತ್ಯುನ್ನತ ಶ್ರೇಣಿಯ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕೋರ್ಸುಗಳಾಗಿದ್ದು, 2013–14 ನೇ ಸಾಲಿನಲ್ಲಿ ಒಟ್ಟು 82 ಸ್ನಾತಕೋತ್ತರ ಸೂಪರ್ ಸ್ಪೆಷಾಲಿಟಿ ಸೀಟುಗಳು ಸರ್ಕಾರಿ ಕೋಟಾದಡಿ ಪರೀಕ್ಷೆ ಮತ್ತು ಕೌನ್ಸಿಲಿಂಗ್ ಮೂಲಕ ಹಂಚಿಕೆಯಾಗಿವೆ. ಈ ಸೂಪರ್ ಸ್ಪೆಷಾಲಿಟಿ ಕೋರ್ಸುಗಳ ಸರ್ಕಾರಿ ಕೋಟಾದ ಸೀಟುಗಳ ಪ್ರವೇಶಾತಿಯನ್ನು ಕರ್ನಾಟಕ ವೈದ್ಯಕೀಯ ಕಾಲೇಜುಗಳು (ಸ್ನಾತಕೋತ್ತರ ಸೂಪರ್

ಸ್ಪೆಷಾಲಿಟಿ ಕೋರ್ಸುಗಳಿಗೆ ಪ್ರವೇಶ ಪರೀಕ್ಷೆ ಮತ್ತು ಆಯ್ಕೆ) ನಿಯಮಗಳು, 1981 ರನ್ವಯ ನಡೆಸಲಾಗುತ್ತಿದೆ. ಈ ಸರ್ಕಾರಿ ಕೋಟಾದ ಸೀಟುಗಳಲ್ಲಿ 50% ಸೀಟುಗಳನ್ನು ಸೇವಾನಿರತ ಕೋಟಾದ ಅಭ್ಯರ್ಥಿಗಳಿಗೆ ಮೀಸಲಿಡಲಾಗಿದೆ. ಆದಾಗ್ಯೂ ಸೂಪರ್ ಸ್ಪೆಷಾಲಿಟಿ ಕೋರ್ಸುಗಳನ್ನು ರಾಜ್ಯದ ಸಾಮಾನ್ಯ ಮೀಸಲಾತಿ ನೀತಿಯಿಂದ ಹೊರಗಿಡಲಾಗಿದ್ದು, ಈ ಪ್ರವೇಶಾತಿಗಳು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾಗಳ ವಿಶ್ವವಿದ್ಯಾಲಯವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆ, ಸಂದರ್ಶನ ಹಾಗೂ ಕೌನ್ಸಿಲಿಂಗ್ ಆಧಾರದ ಮೇಲೆ ಮಾಡಲಾಗುತ್ತಿದೆ.

ಇನ್ನುಳಿದಂತೆ ಅನುದಾನರಹಿತ ವೈದ್ಯಕೀಯ ಕಾಲೇಜುಗಳು, ಡೀಮ್ಡ್ ವಿಶ್ವವಿದ್ಯಾಲಯಗಳು ಹಾಗೂ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳೂ ಸೇರಿದಂತೆ ವೃತ್ತಿಪರ ಶಿಕ್ಷಣ ಸಂಸ್ಥೆಗಳಲ್ಲಿನ ಸರ್ಕಾರಿ ಕೋಟಾ ಹೊರತಾದ ಸೂಪರ್ ಸ್ಪಷಾಲಿಟಿ ಸೀಟುಗಳಿಗೆ ತಮ್ಮದೇ ಆದ ಸ್ವಂತ ಪ್ರವೇಶ ಪರೀಕ್ಷೆಗಳನ್ನು ನಡೆಸುತ್ತಿದ್ದು, ಸದರಿ ಪರೀಕ್ಷೆಯ ಮೂಲಕ ತಮ್ಮ ಕೋಟಾದ ಸೀಟುಗಳನ್ನು ಭರ್ತಿ ಮಾಡಿಕೊಳ್ಳುತ್ತಿವೆ.

ಸಾರ್ವಜನಿಕ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ವೃತ್ತಿಪರ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿಯನ್ನು ಒದಗಿಸುವುದು ತುಂಬಾ ಅಗತ್ಯವಿರುವುದರಿಂದ ಸ್ನಾತಕೋತ್ತರ ಸೂಪರ್ ಸ್ಪೆಷಾಲಿಟಿ ಕೋರ್ಸುಗಳಿಗೆ ಪ್ರವೇಶಾತಿಯನ್ನು ಬಯಸುವ ಎಲ್ಲಾ ವಿದ್ಯಾರ್ಥಿಗಳಿಗೆ ಪ್ರವೇಶಾತಿಯಲ್ಲಿ ಸಮಾನತೆ ಹಾಗೂ ಸಮಾನ ಅವಕಾಶ ನೀಡಬೇಕಾಗಿರುತ್ತದೆ. ದಿನಾಂಕ: 22–08–2013 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ 2014–15 ನೇ ಸಾಲಿನಿಂದ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಅಧಿನಿಯಮ 8, 2006 ಅಂದರೆ ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ನ್ನು ಜಾರಿಗೆ ತರಲು ನಿರ್ಧರಿಸಲಾಗಿದೆ.

ಸದರಿ ಅಧಿನಿಯಮದ ಕಲಂ 2 (ಪಿ) (I) ರನ್ವಯ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಶಿಕ್ಷಣ ಸಂಸ್ಥೆಗಳಲ್ಲಿ ವೃತ್ತಿಪರ ಶಿಕ್ಷಣ ಕೋರ್ಸು ಎನ್ನುವುದನ್ನು ಈ ಕೆಳಗಿನಂತೆ ವ್ಯಾಖ್ಯಾನಿಸಲಾಗಿದೆ.

II. ವೈದ್ಯಕೀಯ ಮತ್ತು ದಂತ ವೈದ್ಯಕೀಯ ಸಂಸ್ಥೆಗಳಲ್ಲಿ ಪ್ರಥಮ ವರ್ಷದ

iii) ಬ್ಯಾಚುಲರ್ ಆಫ್ ಮೆಡಿಸಿನ್ & ಬ್ಯಾಚುಲರ್ ಆಫ್ ಸರ್ಜರಿ ಮತ್ತು

iv) ಬ್ಯಾಚುಲರ್ ಆಫ್ ಡೆಂಟಲ್ ಸರ್ಜರಿ.

ಆದಾಗ್ಯೂ "ರಾಜ್ಯ ಸರ್ಕಾರವು ಅಧಿಸೂಚಿಸಿರುವ ಸೂಪರ್ ಸ್ಪೆಷಾಲಿಟಿ ಕೋರ್ಸುಗಳನ್ನೂ ಒಳಗೊಂಡಂತೆ ಸ್ನಾತಕ ಮತ್ತು ಸ್ನಾತಕೋತ್ತರ ಮಟ್ಟದ ವೃತ್ತಿಪರ ಶಿಕ್ಷಣ ಕೋರ್ಸುಗಳು" ಎಂಬ ಪರಂತುಕವನ್ನು ಸಹ ಸೇರಿಸಲಾಗಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಪ್ರಥಮ ವರ್ಷದ ಸ್ನಾತಕೋತ್ತರ ಸೂಪರ್ ಸ್ಪೆಷಾಲಿಟಿ ಕೋರ್ಸುಗಳನ್ನು ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರಡಿ ಬರುವ ವೃತ್ತಿಪರ ಶಿಕ್ಷಣ ಕೋರ್ಸುಗಳೊಂದಿಗೆ ಸೇರಿಸಿ ಅಧಿಸೂಚನೆ ಹೊರಡಿಸಲು ಅನುಮೋದನೆ ಕೋರಿ ದಿನಾಂಕ: 21–11–2013 ರಂದು ನಡೆದ ಸಚಿವ ಸಂಪುಟದ ಮುಂದೆ ಮಂಡಿಸಿದ್ದು, ಪ್ರಕರಣ ಸಂಖ್ಯೆ: ಸಿ: 803/2013 ರನ್ವಯ ಸಚಿವ ಸಂಪುಟವು ಅನುಮೋದಿಸಿರುತ್ತದೆ.

ಆದ್ದರಿಂದ ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರ ಕಲಂ (ಪಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಥಮ ವರ್ಷದ ಸ್ನಾತಕೋತ್ತರ ಸೂಪರ್ ಸ್ಪೆಷಾಲಿಟಿ ಕೋರ್ಸುಗಳನ್ನು ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರಡಿ ಬರುವ ವೃತ್ತಿಪರ ಶಿಕ್ಷಣ ಕೋರ್ಸುಗಳೊಂದಿಗೆ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಬೂಬ್ ಖಾನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ & ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

P.R. 1209
SC - 50

## ಇಂಧನ ಸಚಿವಾಲಯ

**ವಿಷಯ:** ಮೆ: ಏಟ್ರಿಯಾ ಬೃಂದಾವನ್ ಪವರ್ ಲಿ., ರವರಿಗೆ ಹಂಚಿಕೆಯಾಗಿರುವ 4.00 ಮೆ.ವ್ಯಾ. ಸಾಮರ್ಥ್ಯದ ಹನುಮನಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 8.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 128 ಎನ್‌ಸಿಇ 2011 ದಿನಾಂಕ: 08.11.2011.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/ಎಸ್‌ಹೆಚ್ 772/ಹನುಮನಹಳ್ಳ–ಎಂಹೆಚ್‌ಎಸ್/1777 ದಿನಾಂಕ: 27./29.06.2011.
3. ದಿನಾಂಕ 07.07.2012 ರಂದು ನಡೆದ ಹಂಚಿಕೆ ಸಮಿತಿ ನಡವಳಿ.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯಾ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹನುಮನಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್.

ಅಣೆಕಟ್ಟು, ಉತ್ತರ ದಡದ ಹತ್ತಿರ ಹಂಚಿಕೆ ಮಾಡಿರುವ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹನುಮನಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 8.00 ಮೆ.ವ್ಯಾಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3) ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ : ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ರವರ ಪ್ರಸ್ತಾವಿತ ಸಾಮರ್ಥ್ಯ ಹೆಚ್ಚಳ ಯೋಜನೆಗೆ ನೀರಾವರಿ ಇಲಾಖೆಯ ಅನುಮತಿ ಪಡೆಯತಕ್ಕದ್ದೆಂಬ ಷರತ್ತಿಗೊಳಪಟ್ಟು 4.00 ಮೆ.ವ್ಯಾ.ನಿಂದ 8.00 ಮೆ.ವ್ಯಾ. ಸಾಮರ್ಥ್ಯ ಹೆಚ್ಚಳಕ್ಕೆ ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 214 ಎನ್‌ಸಿಇ 2012, ಬೆಂಗಳೂರು, ದಿನಾಂಕ: 21.07.2012.**

ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ ಹಂಚಿಕೆಯಾಗಿರುವ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹನುಮನಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ನೀರಾವರಿ ಇಲಾಖೆಯ ಅನುಮತಿಯನ್ನು ಪಡೆಯತಕ್ಕದ್ದೆಂಬ ಷರತ್ತಿಗೊಳಪಟ್ಟು 4.00 ಮೆ.ವ್ಯಾ ನಿಂದ **8.00 ಮೆ.ವ್ಯಾ** ಸಾಮರ್ಥ್ಯಕ್ಕೆ **ಹೆಚ್ಚಿಸಿ** ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಈ ಹೆಚ್ಚುವರಿ ಸಾಮರ್ಥ್ಯಕ್ಕೂ ಯಥಾವತ್ತಾಗಿ ಮುಂದುವರಿಯುತ್ತವೆ. ಹಾಗೆಯೇ ಈಗಾಗಲೇ ಸೂಚಿಸಿರುವಂತೆ ಈ ಯೋಜನೆಗೆ ಪೂರ್ವಭಾವಿಯಾಗಿ ಸಂಬಂಧಪಟ್ಟ ಎಲ್ಲಾ ಇಲಾಖೆಗಳ ಅಂದರೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ, ಕಂದಾಯ ಇಲಾಖೆಗಳ ಕ್ಲಿಯರೆನ್ಸ್‌ಗಳನ್ನು ಹೆಚ್ಚುವರಿ ಸಾಮರ್ಥ್ಯಕ್ಕೂ ಸಹ ಪಡೆಯತಕ್ಕದ್ದು.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

P.R. 965
SC - 25

## ಇಂಧನ ಸಚಿವಾಲಯ

**ವಿಷಯ:** ಮೆ: ಏಟ್ರಿಯಾ ಬೃಂದಾವನ್ ಪವರ್ ಲಿ., ರವರಿಗೆ ಹಂಚಿಕೆಯಾಗಿರುವ 6.00 ಮೆ.ವ್ಯಾ. ಸಾಮರ್ಥ್ಯದ ವಿಶ್ವೇಶ್ವರಯ್ಯ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 12.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 109 ಎನ್‌ಸಿಇ 2011 ದಿನಾಂಕ: 08.11.2011.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/06/ಎಸ್‌ಹೆಚ್–771/ವಿಶ್ವೇಶ್ವರಯ್ಯ–ಎಂಹೆಚ್‌ಎಸ್/1776 ದಿನಾಂಕ: 27./29.06.2011.
3. ದಿನಾಂಕ 07.07.2012 ರಂದು ನಡೆದ ಹಂಚಿಕೆ ಸಮಿತಿ ನಡವಳಿ.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ 6.00 ಮೆಗಾ ವ್ಯಾಟ್ ಸಾಮರ್ಥ್ಯದ ವಿಶ್ವೇಶ್ವರಯ್ಯ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 12.00 ಮೆ.ವ್ಯಾಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3) ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ : ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ರವರ ಪ್ರಸ್ತಾವಿತ ಸಾಮರ್ಥ್ಯ ಹೆಚ್ಚಳ ಯೋಜನೆಗೆ ನೀರಾವರಿ ಇಲಾಖೆಯ ಅನುಮತಿ ಪಡೆಯತಕ್ಕದ್ದೆಂಬ ಷರತ್ತಿಗೊಳಪಟ್ಟು 6.00 ಮೆ.ವ್ಯಾ.ನಿಂದ 12.00 ಮೆ.ವ್ಯಾ. ಸಾಮರ್ಥ್ಯ ಹೆಚ್ಚಳಕ್ಕೆ ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 213 ಎನ್‌ಸಿಇ 2012, ಬೆಂಗಳೂರು, ದಿನಾಂಕ: 21.07.2012.**

ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ವಿಶ್ವೇಶ್ವರಯ್ಯ ಕಿರು ಜಲ ವಿದ್ಯುತ್ ಯೋಜನೆಯ

ಸಾಮರ್ಥ್ಯವನ್ನು ನೀರಾವರಿ ಇಲಾಖೆಯ ಅನುಮತಿಯನ್ನು ಪಡೆಯತಕ್ಕದ್ದೆಂಬ ಷರತ್ತಿಗೊಳಪಟ್ಟು 6.00 ಮೆ.ವ್ಯಾ. ನಿಂದ 12.00 ಮೆ.ವ್ಯಾ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಈ ಹೆಚ್ಚುವರಿ ಸಾಮರ್ಥ್ಯಕ್ಕೂ ಯಥಾವತ್ತಾಗಿ ಮುಂದುವರಿಯುತ್ತವೆ. ಹಾಗೆಯೇ ಈಗಾಗಲೇ ಸೂಚಿಸಿರುವಂತೆ ಈ ಯೋಜನೆಗೆ ಪೂರ್ವಭಾವಿಯಾಗಿ ಸಂಬಂಧಪಟ್ಟ ಎಲ್ಲಾ ಇಲಾಖೆಗಳ ಅಂದರೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ, ಕಂದಾಯ ಇಲಾಖೆಗಳ ಕ್ಲಿಯರೆನ್ಸ್‌ಗಳನ್ನು ಹೆಚ್ಚುವರಿ ಸಾಮರ್ಥ್ಯಕ್ಕೂ ಸಹ ಪಡೆಯತಕ್ಕದ್ದು.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**P.R. 966**
**SC - 25**

## ಇಂಧನ ಸಚಿವಾಲಯ

**ವಿಷಯ:** ಮೆ: ಅಭಿಷೇಕ್ ಎಕ್ಸ್‌ಪೋರ್ಟ್ಸ್ (ಇಂಡಿಯಾ) ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ENN ENN CORP LIMITED ಎಂದು ಬದಲಾಯಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 19 ಎನ್‌ಸಿಇ 2005(1) ದಿನಾಂಕ: 03.2.2005.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 618 ಎನ್‌ಸಿಇ 2009 ದಿನಾಂಕ: 06.03.2010.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/AE(I)PL-ENN/2012/1763 ದಿನಾಂಕ: 26/27.06.2012

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಹಂಚಿಕೆಯಾಗಿದ್ದ 20 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 1.25 ಮೆ.ವ್ಯಾ. ಸಾಮರ್ಥ್ಯವನ್ನು ಮೆ:: ಅಭಿಷೇಕ್ ಎಕ್ಸ್‌ಪೋರ್ಟ್ಸ್ ಕಂಪನಿಗೆ ವರ್ಗಾಯಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಬೆಳಗುಟ್ಟಿ ಗ್ರಾಮದಲ್ಲಿ ಮಂಜೂರಾಗಿರುವ 111.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 2.5 ಮೆ.ವ್ಯಾ. ಸಾಮರ್ಥ್ಯವನ್ನು ಮೆ:: ಅಭಿಶೇಕ್ ಎಕ್ಸ್‌ಪೋರ್ಟ್ಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸಿ ಆದೇಶಿಸಲಾಗಿರುತ್ತದೆ.

ಮೆ: ಅಭಿಶೇಕ್ ಎಕ್ಸ್‌ಪೋರ್ಟ್ಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ENN ENN CORP LIMITED ಎಂದು ಹೆಸರು ಬದಲಾಯಿಸಿ ರಿಜಿಸ್ಟ್ರಾರ್ ಆಫ್ ಕಂಪನೀಸ್ ಮಹಾರಾಷ್ಟ್ರ, ಮುಂಬೈ ರವರ ದಿನಾಂಕ 02.12.2010ರಂದು ಪ್ರಮಾಣ ಪತ್ರವನ್ನು ನೀಡಿರುವುದರಿಂದ (CIN No: U74900MH2007PLC189457) ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಹೆಸರು ಬದಲಾವಣೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 187 ಎನ್‌ಸಿಇ 2012, ಬೆಂಗಳೂರು, ದಿನಾಂಕ: 21.07.2012.**

ಮೆ : ಅಭಿಷೇಕ್ ಎಕ್ಸ್‌ಪೋರ್ಟ್ಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ENN ENN CORP LIMITED ಎಂದು ಬದಲಾಯಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**P.R. 967**
**SC - 25**

## ಇಂಧನ ಸಚಿವಾಲಯ

**ವಿಷಯ:** ಮೆ:: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಮಂಜೂರಾಗಿರುವ 5.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 2.1 ಮೆ.ವ್ಯಾ. ಸಾಮರ್ಥ್ಯವನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 407 ಎನ್‌ಸಿಇ 2008 ದಿನಾಂಕ: 19.5.2009.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 396 ಎನ್‌ಸಿಇ 2011 ದಿನಾಂಕ: 30.12.2011

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GE-2.1 MW – AEEPL(5.00)/2012/673ದಿನಾಂಕ: 29.2/09.3.2012 ಮತ್ತು KRED/08/GE-2.1 MW – AEEPL(5.00)/2012/2008 ದಿನಾಂಕ: 16.7.2012.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮೆ:: ದಿಶಾ ಪವರ್ ಕಾರ್ಪೋರೇಷನ್ (ಪ್ರೈ) ಲಿಮಿಟೆಡ್ ಕಂಪನಿಗೆ ಹಾವೇರಿ ಜಿಲ್ಲೆಯ ವಿವಿಧ ಪ್ರದೇಶದಲ್ಲಿ 20.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಈ ಸಾಮರ್ಥ್ಯದಿಂದ 5.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ:: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಈ ಕೆಳಗೆ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ವರ್ಗಾಯಿಸಿ ಆದೇಶಿಸಲಾಗಿತ್ತು.

**<u>Schedule</u>**

| Capacity in MW | Lacation and District | Description |
|---|---|---|
| 5.00 MW | **Area (1):**<br>Bavapur, Chikka Budihal, Shankaranhalli, Hire Budihal, Aralikatti Haveri District.<br>**Area-(2) :**<br>Guddada Hosahalli, Guddada Bevinahalli, Aladgeri, Haveri District. | Two areas are proposed for the stated capacity. These two areas are having independent non-contiguous small ridges and are located respectively Yelavadhalliy, Chikka Budihal, Guddada Hosahalli, Both are of open scrub and have two peaks in each area. The identified area held in the following Geographical co-oridinates :-<br>**Area (1):**<br>**Latitude**: 14°32'22"- 14°34'20" N<br>**Longitude**: 75°25'57"- 75°29'12'' E<br>**Ridge peaks:** 727, 682m AMSL.<br>**Area (1):**<br>**Latitude**: 14°32'58"- 14°33'48" N<br>**Longitude**: 75°29'29"- 75°30'32'' E<br>**Ridge peaks:** 707, 688m AMSL. |

**LAND DETAILS OF THE PROJECT**

| Village Name | Taluk | District | MW | Type of land | Land Sy. No. | No. of WTGs | Extent in Land (Acres) |
|---|---|---|---|---|---|---|---|
| Babapura | Hirekerur | Haveri | 0.8 | Revenue | 4 | 01 | 3.00 |
| Hirebudihal | Hirekerur | | 0.8 | Private | 54 | 01 | 1.00 |
| Aladhgere | Hirekerur | | 0.8 | Revenue | 27 | 01 | 2.00 |
| Aladhgere | Hirekerur | | 0.8 | Revenue | 50 | 01 | 5.00 |
| Aladhgere | Hirekerur | | 0.8 | Revenue | 20 | 01 | 2.00 |
| Guddada Hosahalli | Ranebennur | | 0.5 | Revenue | 157 | 01 | 4.00 |
| Chikka Budihal | Hirekerur | | 0.5 | Forest | 43 | 01 | 2.00 |
| | | | **5.0** | | | | |

1 **ಮೆ:: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್** ರವರು **45** ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳ ತಕ್ಕದ್ದು.

2 **ಮೆ:: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್** ರವರು **ವಿದ್ಯುತ್ ಖರೀದಿ ಒಪ್ಪಂದವನ್ನು** ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ಮಾಡಿಕೊಳ್ಳತಕ್ಕದ್ದು.

3 ಸದರಿ ಯೋಜನೆಯನ್ನು **ದಿನಾಂಕ 30.6.2012 ರೊಳಗಾಗಿ** ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter).

ಮೇಲೆ ಓದಲಾದ (3)ರ ದಿನಾಂಕ 29.2./09.3.2012ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಮಂಜೂರಾಗಿರುವ 5.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.1 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ರವರಿಗೆ ವರ್ಗಾಯಿಸಲು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ದಿನಾಂಕ 16.7.2012ರ ಪತ್ರದಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ನೀಡಿದ್ದ ಅವಧಿಯು ಮುಕ್ತಾಯಗೊಂಡಿದ್ದು ಈ ಅವಧಿಯನ್ನು ದಿನಾಂಕ 30.8.2012ರವರೆಗೆ ವಿಸ್ತರಿಸಲು ಮತ್ತು ಉತ್ಪಾದಿತ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಲು ಅಭಿವೃದ್ಧಿದಾರರು ಕೋರಿರುತ್ತಾರೆಂದು ಹಾಗೂ ಯೋಜನೆಯನ್ನು 30.08.2012ರೊಳಗಾಗಿ ಅನುಷ್ಠಾನಗೊಳಿಸಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 128 ಎನ್‌ಸಿಇ 2012, ಬೆಂಗಳೂರು, ದಿನಾಂಕ: 30.07.2012.**

ಮೆ : ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 5.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **2.1 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ಕಂಪನಿಯವರಿಗೆ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**Land details of the project**

| Village Name | Taluk & District | MW | Land survey number | Land Sy. No. | Extent in land | WTG Location No. | Latitude, Longitude and Ridge peaks |
|---|---|---|---|---|---|---|---|
| Aladhgere | Hirkerur / Haveri | 2.1 | 27 | 1 No. | 2 Acres per WTG | RAN-100 | **Latitude**: 14°33'01.0"- N<br>**Longitude**:75°28'11.8"- E<br>**Ridge peaks:** 665m |

1 **ಮೆ:: ಗಿರಿರಾಜ್ ಎಂಟರ್‌ಪ್ರೈಸಸ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಗಿರಿರಾಜ್ ಎಂಟರ್‌ಪ್ರೈಸಸ್** ರವರು 3ನೇ ವ್ಯಕ್ತಿಯೊಂದಿಗೆ ವೀಲಿಂಗ್ ಮತ್ತು ಬ್ಯಾಂಕಿಂಗ್ ಮಾಡಿಕೊಳ್ಳಲು ಅನುಮತಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 30.8.2012**ರೊಳಗಾಗಿ** ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)

4 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**P.R. 969**
**SC - 25**

**ಇಂಧನ ಸಚಿವಾಲಯ**

**ವಿಷಯ:** ಮೆ : ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.85 ಮೆ.ವ್ಯಾ. ಸಾಮರ್ಥ್ಯವನ್ನು ಮೆ:: ಚಾಮುಂಡೇಶ್ವರಿ ಬಿಲ್ಡ್ ಟೆಕ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 337 ಎನ್‌ಸಿಇ 2006 ದಿನಾಂಕ: 16.10.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 9 ಎನ್‌ಸಿಇ 2007 ದಿನಾಂಕ: 12.1.2007.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 432 ಎನ್‌ಸಿಇ 2010 ದಿನಾಂಕ: 16.12.2010

4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 318 ಎನ್‌ಸಿಇ 2011 ದಿನಾಂಕ: 26.7.2011.

5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 166 ಎನ್‌ಸಿಇ 2011 ದಿನಾಂಕ: 25.7.2011

6) ಸರ್ಕಾರಿ ಆದೇಶ ಸಂಖ್ಯೆ: ಇಎನ್ 89 ಎನ್‌ಸಿಇ 2012 (4) ದಿನಾಂಕ: 05.3.2012.

7) ಸರ್ಕಾರಿ ಆದೇಶ ಸಂಖ್ಯೆ: ಇಎನ್ 225 ಎನ್‌ಸಿಇ 2012 ದಿನಾಂಕ: 06.08.2012

8) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/SRR/CBTPL-0.85 MW (GNS-16)/RSR/2012/2107 ದಿನಾಂಕ: 20/23.7.2012.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ : ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಕಂಪನಿಗೆ ದಾವಣಗೆರೆ, ಬಳ್ಳಾರಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 63 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಮೆ : ಆರ್. ಶ್ರೀ ರಾಮುಲು ರೆಡ್ಡಿ ಮತ್ತು ಕೋ ಹೆಸರನ್ನು ಮೆ : ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಮೇಲ್ಕಂಡಂತೆ ಹಂಚಿಕೆಯಾಗಿರುವ ಒಟ್ಟು ಸಾಮರ್ಥ್ಯದಲ್ಲಿ, ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಿರುವ ಅಂಶಿಕ ಸಾಮರ್ಥ್ಯವಾಗಿರುವ 7 ಮೆ.ವ್ಯಾ. ಸಾಮರ್ಥ್ಯವನ್ನು 30.60 ಮೆ.ವ್ಯಾ.ಗೆ ಹೆಚ್ಚಿಸಿ ಈ ಸಾಮರ್ಥ್ಯದಲ್ಲಿ 25 ಮೆ.ವ್ಯಾ. ವಿದ್ಯುತ್ತನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡುವಂತೆ ಹಾಗೂ ಈ ಯೋಜನೆಯನ್ನು ದಿನಾಂಕ 31.3.2011ರೊಳಗೆ ಅನುಷ್ಠಾನಗೊಳಿಸತಕ್ಕದೆಂದು ಆದೇಶಿಸಲಾಗಿತ್ತು. ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ 31.12.2011ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಆದೇಶದಲ್ಲಿ ಮೆ : ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ನೆಲಗಂಟಿ ಗ್ರಾಮದ ಅಂಶಿಕ ಸಾಮರ್ಥ್ಯವನ್ನು 15 ಮೆ.ವ್ಯಾ ನಿಂದ 40 ಮೆ.ವ್ಯಾ.ಗೆ ಹಾಗೂ ಉಮ್ರಾಣಿ ಗ್ರಾಮದ ಅಂಶಿಕ ಸಾಮರ್ಥ್ಯವನ್ನು 15 ಮೆ.ವ್ಯಾ. ನಿಂದ 100 ಮೆ.ವ್ಯಾ.ಗೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಆದೇಶದಲ್ಲಿ ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು 30.60 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಈ ಸಾಮರ್ಥ್ಯದಲ್ಲಿ 25 ಮೆ.ವ್ಯಾ. ಸಾಮರ್ಥ್ಯವನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡುವಂತೆ ಸರ್ಕಾರಿ ಆದೇಶ ಸಂ:ಇಎನ್ 432 ಎನ್‌ಸಿಇ 2010 ದಿ:16.12.2010 ರಲ್ಲಿ ವಿಧಿಸಿರುವ ಷರತ್ತನ್ನು ತೆಗೆದುಹಾಕಲಾಗಿತ್ತು ಹಾಗೂ ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಬೆಳಗಾವಿ ಜಿಲ್ಲೆಯಲ್ಲಿ ಕೈಗೊಳ್ಳುತ್ತಿರುವ 40 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 25 ಮೆ.ವ್ಯಾ. ಸಾಮರ್ಥ್ಯವನ್ನು ರಾಜ್ಯದ ಗ್ರಿಡ್‌ಗೆ ಸರಬರಾಜು ಮಾಡತಕ್ಕದೆಂದ್ದು ಮತ್ತು ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನಲ್ಲಿ ಅನುಷ್ಠಾನ ಮಾಡಲು ಬಾಕಿ ಇರುವ 17.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 30.06.2012 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ಆದೇಶದಲ್ಲಿ ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ, ಬಾಕಿ ಉಳಿದಿರುವ 15.3 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಅಂತಿಮವಾಗಿ ಕಾಲಾವಕಾಶವನ್ನು ದಿನಾಂಕ: 31.03.2013ರ ವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8) ರ ಪತ್ರದಲ್ಲಿ ಮೆ : ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಮತಿಸಿರುವ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 15.30 ಮೆ.ವ್ಯಾ. ಸಾಮರ್ಥ್ಯವನ್ನು ಅನುಷ್ಠಾನಗೊಳಿಸಿರುತ್ತಾರೆಂದು ತಿಳಿಸುತ್ತಾ ಸದರಿ ಕಂಪನಿಯವರಿಗೆ ಹಂಚಿಕೆಯಾಗಿರುವ ಸಾಮರ್ಥ್ಯದಿಂದ 0.85 ಮೆ.ವ್ಯಾ. ಸಾಮರ್ಥ್ಯದ ಯೊಜನೆಯನ್ನು ಮೆ:: ಚಾಮುಂಡೇಶ್ವರಿ ಬಿಲ್ಡ್ ಟೆಕ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ ಹಾಗೂ ಈ ಯೋಜನೆಯನ್ನು ದಿನಾಂಕ 30.09.2012ರೊಳಗೆ ಅನುಷ್ಠಾನಗೊಳಿಸಲಾಗುವುದು ಮತ್ತು ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ ಸ್ವಂತಕ್ಕೆ ಬಳಸಿಕೊಳ್ಳಲಿರುವುದಾಗಿ (Captive Consumption) ಅಭಿವೃದ್ಧಿದಾರರು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 227 ಎನ್‌ಸಿಇ 2012, ಬೆಂಗಳೂರು, ದಿನಾಂಕ: 13.08.2012.**

ಮೆ:: ಆರ್‌ಎಸ್‌ಆರ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಮತಿಸಲಾದ 30.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **0.85 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಚಾಮುಂಡೇಶ್ವರಿ ಬಿಲ್ಡ್ ಟೆಕ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಈ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮತಿ ನೀಡಲಾಗಿದೆ :–

| Location and District | Geographical description of the project |
|---|---|
| Shirgaon village, Chikodi Taluk, **Belgaum District.** | The identified potential comprises of two areas and is a mixture of hill and palins. Area-A is spread N-E direction of Shirgaon. Whereas Area-B is located in South of Girgaon and is spread in E-W directions. The Geographical co-ordinates of Area-A & Area-B are as follows:<br>**Area-A**<br>**Latitude**: 16°27'32"- 16°30'0" N<br>**Longitude**: 74°31'06"- 74°32'57" E<br>**Ridge peaks:** 620 and 647 M Amsl<br>**Area-B**<br>**Latitude**: 16°25'52"- 16°26'41" N<br>**Longitude**: 74°30'52"- 74°32'41" E<br>**Ridge peaks:** 720 M Amsl<br>**Topo Sheet**: 47L/11 |

**Land Details**

| Village Name | Taluk & District | MW | Land Survey Number | No. of WTG's | Extent in Land (Acres) | WTG location Number |
|---|---|---|---|---|---|---|
| Shirgaon | Chikkodi / Belgaum | 0.85 | 133/1B | 1 No. | 2 Acres | GNS-16 |

1 **ಮೆ:: ಚಾಮುಂಡೇಶ್ವರಿ ಬಿಲ್ಡ್ ಟೆಕ್ ಪ್ರೈವೇಟ್ ಲಿಮಿಟೆಡ್** ಕಂಪನಿಯವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಚಾಮುಂಡೇಶ್ವರಿ ಬಿಲ್ಡ್ ಟೆಕ್ ಪ್ರೈವೇಟ್ ಲಿಮಿಟೆಡ್** ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ ಸ್ವಂತಕ್ಕೆ ಬಳಸಿಕೊಳ್ಳಲು (Captive Consumption) ಅನುಮತಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 30.9.2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)

4 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**P.R. 970**

**SC - 25**